೧೩. ಶಿಕ್ಷಿತುಂ ದ್ವೌ ನ ಯೋಗ್ಯೌ ಚ ಯಥಾ ಧೇನುಸ್ತಥಾ ದ್ವಿಜಃ ।
ವಸ್ತುದ್ವಯತ್ರಿಕಂ ತ್ರೇಧಾ ಜ್ಞೇಯಮಿತ್ಥಂ ಮನೀಷಿಭಿಃ ॥

ಮನುಷ್ಯನಿಗೆ ಅಮೃತೋಪಾದಿಯಂತಿರುವ ಹಾಲನ್ನು ಕೊಡುತ್ತಾ ಸಹಜವಾಗಿಯೇ ಸಾಧುಸ್ವಭಾವವುಳ್ಳ ಧೇನು (ಹಸು)ವನ್ನು ಕನಸಿನಲ್ಲಿಯೂ ಶಿಕ್ಷಿಸಬಾರದು. ಅಂತೆಯೇ ಸದಾ ಧರ್ಮಮಾರ್ಗಾವಲಂಬಿಯಾಗಿ, ವೇದಾಧ್ಯಯನಸಂಪನ್ನನಾಗಿ ಸ್ವಾರ್ಥರಹಿತ ನಾಗಿ, ಲೋಕಕಲ್ಯಾಣಕ್ಕಾಗಿಯೇ ಜೀವಿಸುತ್ತಿರುವ, ಕ್ಷಣಕಾಲವೂ ದುಷ್ಟ ಸ್ವಭಾವಕ್ಕೆಳಸದ ಬ್ರಾಹ್ಮಣನೂ, ಶಿಕ್ಷೆಗೆ ಅರ್ಹನಾಗುವುದಿಲ್ಲ. ಇವರೀರ್ವರನ್ನೂ ಪೂಜ್ಯಭಾವದಿಂದ ನೋಡಬೇಕು.

೧೪. ಕ್ರಮಶೋ ವರ್ಜನೀಯೌ ದ್ವೌ ದ್ವೌ ಕರ್ತವ್ಯೌ ವಿಚಾರತಃ ।
ಅವಶ್ಯಂ ಸಾಧನೀಯೌ ದ್ವೌ ಶ್ರೀನಿವಾಸಕೃತಂ ಮಹತ್ ॥

ಕಾಲಕ್ರಮೇಣ ತ್ಯಜಿಸಬೇಕಾದ ಎರಡು ವಿಷಯಗಳು ಯಾವುವು? ಹಾಗೆಯೇ ಪ್ರಪಂಚದಲ್ಲಿ ಆಲೋಚಿಸಿಯೇ ಮಾಡಬೇಕಾದ ಎರಡು ವಿಷಯಗಳು ಯಾವುವು? ಮತ್ತು ಮನುಷ್ಯನು ಅತ್ಯವಶ್ಯಕವಾಗಿ ಸಾಧಿಸಲೇಬೇಕಾದ ವಿಷಯಗಳು ಯಾವುವು?

೧೫. ಕ್ರಮಶೋ ವರ್ಜನೀಯೌ ದ್ವೌ ಕಾಮಕ್ರೋಧೌ ಸುಖೇಪ್ಸುಭಿಃ ।
ತ್ಯಾಗಭೋಗೌ ಯಥಾಯೋಗ್ಯಂ ದ್ವೌ ಕರ್ತವ್ಯೌ ವಿಚಾರತಃ ॥

ಮನುಷ್ಯನು ಕಾಮಕ್ರೋಧಗಳನ್ನು ಬಿಡಬೇಕು. ಇವೆರಡೂ ದುಃಖವನ್ನುಂಟು ಮಾಡುತ್ತವೆ. ನಾವು ಕಾಮಿಸಿದ (ಆಶಿಸಿದ) ವಸ್ತು ಸಿಗದಿದ್ದಾಗ ದುಃಖಕ್ಕೆ ಗುರಿಯಾಗುತ್ತೇವೆ, ಅಂತೆಯೇ ಕೋಪೋದ್ರಿಕ್ತನಾದ ಮನುಷ್ಯನು ಯುಕ್ತಾ-ಯುಕ್ತ ವಿವೇಚನೆ ಇಲ್ಲದೆ, ಕೋಪದ ಆವೇಶದಲ್ಲಿ ಮಾಡಬಾರದ ಕೆಲಸವನ್ನು ಮಾಡಿ ಸಂಕಟಕ್ಕೆ ಒಳಗಾಗುತ್ತಾನೆ. ಸಂಗಾತ್ ಸಂಜಾಯತೇ ಕಾಮಃ ..... ಬುದ್ಧಿನಾಶಾತ್ ಪ್ರಣಶ್ಯತಿ ಎಂದು ಗೀತೆಯಲ್ಲೂ ಹೇಳಿದೆ. ಆದ್ದರಿಂದ ಇವೆರಡನ್ನೂ ತ್ಯಾಗಮಾಡಬೇಕು.

ತ್ಯಾಗ ಭೋಗಗಳನ್ನು ಮನುಷ್ಯನ ಮಿತಿಯಲ್ಲಿ ಅನುಸರಿಸಬೇಕು. ಭೋಗವು ಸುಖಜನಕವೇ ಆದರೂ ಮಿತಿಮೀರಿದರೆ ಅವೇ ದುಃಖಕ್ಕೆ ಕಾರಣವಾಗುತ್ತದೆ. ಆದುದರಿಂದ ಭೋಗದಲ್ಲಿ ಅಲ್ಪತ್ಯಾಗವನ್ನು ಅನುಸರಿಸಬೇಕು. ತ್ಯಾಗವು ಮನುಷ್ಯನ ಸುಖ ಹಾಗೂ ಧರ್ಮಾರ್ಜನೆಗೆ ಕಾರಣವಾಗುತ್ತದೆ. (ಅತಿ ಸರ್ವತ್ರ ವರ್ಜಯೇತ್) ಆದುದರಿಂದ ಕಾಮ, ಕ್ರೋಧ, ತ್ಯಾಗ, ಭೋಗಗಳನ್ನು ಔಚಿತ್ಯಪೂರಕವಾಗಿ ಅನುಭವಿಸಬೇಕು.

೧೬. ಅವಶ್ಯಂ ಸಾಧನೀಯೌ ದ್ವೌ ಯೋಗಕ್ಷೇಮೌ ಪ್ರಯತ್ನತಃ ।
ವಸ್ತುದ್ವಯತ್ರಿಕಂ ತ್ರೇಧಾ ಜ್ಞೇಯಮಿತ್ಥಂ ಮನೀಷಿಭಿಃ ॥

CC-0. Oriental Reasearch Library, Mysore. Digitized by Sri Muthulakshmi Research Academy

ಸಿಗದೆ ಇರುವುದನ್ನು ದೊರಕಿಸಿಕೊಳ್ಳುವುದೇ ಯೋಗ (ಅಲಬ್ಧಸ್ಯ ಲಾಭಃ ಯೋಗಃ). ದೊರೆತನಂತರ ಅದನ್ನು ಸಂರಕ್ಷಿಸುವುದೇ ಕ್ಷೇಮ (ಲಬ್ಧಸ್ಯ ಪರಿಪಾಲನಂ ಕ್ಷೇಮಂ). ಮನುಷ್ಯಜನ್ಮವು ಅತ್ಯಂತ ಶ್ರೇಷ್ಠವಾದುದು. ಹೀಗೆ ಮನಷ್ಯನಾಗಿ ಜನಿಸಿದನಂತರ ಪುರುಷಾರ್ಥಸಾಧನೆಗೆ ಅತ್ಯವಶ್ಯವೆನಿಸಿದ ಯೋಗಕ್ಷೇಮಗಳನ್ನು ಸಂಪಾದಿಸಿಕೊಂಡು ಜನ್ಮವನ್ನು ಸಾರ್ಥಕಗೊಳಿಸಿಕೊಳ್ಳಬೇಕು ಇದೇ ಮೂರನೆಯ ಪ್ರಶ್ನೆಗೆ ಉತ್ತರ.

೧೭. ಪ್ರತಿವಸ್ತು ದ್ವಯೋರ್ಯೋಗೋ ವಿಯೋಗಶ್ಶಾಶ್ವತೋ ದ್ವಯೋಃ ।
ಪ್ರತಿಮಾಸಂ ದ್ವಯೋರ್ಯೋಗಃ ಶ್ರೀನಿವಾಸಕೃತಂ ಮಹತ್ ॥

ಎರಡು ವಸ್ತುಗಳು ಸದಾ ಒಟ್ಟಿಗೇ ಇರುತ್ತವೆ (ಇವೆರಡಕ್ಕೂ ಶಾಶ್ವತವಾದಯೋಗ) ಅವು ಯಾವುವು? ಮತ್ತೆ ಎರಡಕ್ಕೆ ಶಾಶ್ವತವಾದ ವಿಯೋಗವಿರುತ್ತದೆ ಎಂದರೆ ಎರಡರಲ್ಲಿ ಒಂದು ಇದ್ದಾಗ ಮತ್ತೊಂದು ಅದರ ಜೊತೆ ಇರುವುದಿಲ್ಲ. ಆ ಎರಡು ವಸ್ತುಗಳು ಯಾವುವು? ಪ್ರತಿ ತಿಂಗಳಲ್ಲಿಯೂ ಒಮ್ಮೆ ಎರಡು ವಸ್ತುಗಳು ಸಂಧಿಸುತ್ತವೆ (ಸಂಬಂಧ ಪಡೆಯುತ್ತವೆ). ಆದುದರಿಂದ ಅವೆರಡಕ್ಕೆ ತಿಂಗಳಿಗೊಮ್ಮೆ ಯೋಗ ಆ ಎರಡು ಯಾವುವು? ಹೀಗೆ ಇಲ್ಲಿ ಮೂರು ಪ್ರಶ್ನೆಗಳಿವೆ.

೧೮. ಪ್ರತಿವಸ್ತು ದ್ವಯೋರ್ಯೋಗೋ ಗುಣಸ್ಯಾವಗುಣಸ್ಯ ಚ ।
ತೇಜಸಸ್ತಮಸಶ್ಚೈವ ವಿಯೋಗಶ್ಶಾಶ್ವತೋ ಮಿಥಃ ॥

ವಿರುದ್ಧವಾದ ಗುಣ ಅವಗುಣಗಳು ಎಲ್ಲಾ ಕಡೆಯಲ್ಲೂ ಇರುತ್ತವೆ. ಕೇವಲ ಗುಣ ವಿಶಿಷ್ಟನಾದ ಮನುಷ್ಯನು ದೊರಕುವುದು ದುರ್ಲಭ. ಎಷ್ಟೇ ಗುಣವುಳ್ಳ ಮನುಷ್ಯ ನಲ್ಲಿಯೂ ಅಲ್ಪವಾದರೂ ದೋಷವು ಇದ್ದೇ ಇರುತ್ತದೆ. ಆದುದರಿಂದಲೇ ಮನುಷ್ಯನು ಸ್ವಭಾವತಃ ಗುಣ, ಅವಗುಣಗಳೆಂಬ ಎರಡನ್ನೂ ಹೊಂದಿರುತ್ತಾನೆ. ಗುಣ ಹಾಗೂ ದೋಷಗಳೆರಡರ ಯೋಗವನ್ನು ಇಲ್ಲಿ ಕಾಣಬಹುದು.

ಎರಡನೆಯ ಪ್ರಶ್ನೆಯಲ್ಲಿ ಶಾಶ್ವತವಾದ ವಿಯೋಗವನ್ನು ಗುರುತಿಸುತ್ತೇವೆ. ತಮಸ್ಸು ಹಾಗೂ ತೇಜಸ್ಸು ಕತ್ತಲೆ ಹಾಗೂ ಪ್ರಕಾಶ (ಬೆಳಕು) ಗಳಲ್ಲಿ ಯಾವಾಗಲೂ ವಿಯೋಗವನ್ನು ನೋಡುತ್ತೇವೆ. ಇವೆರಡೂ ವಿರುದ್ಧ ಗುಣಗಳನ್ನು ಹೊಂದಿರುವುದ ರಿಂದ ಒಟ್ಟಿಗೆ ಇರುವುದಕ್ಕಾಗುವುದಿಲ್ಲ. ಅಂತೆಯೇ ಇವೆರಡಕ್ಕೂ ವಿಯೋಗವು ಶಾಶ್ವತವಾದುದು. ಹೀಗೆ ಇಲ್ಲಿ ವಿಯೋಗವನ್ನು ಗುರುತಿಸಬಹುದು.

೧೯. ಪ್ರತಿಮಾಸು ದ್ವಯೋರ್ಯೋಗೋ ದರ್ಶೇ ಸ್ಯಾಚ್ಚಂದ್ರಸೂರ್ಯಯೋಃ ।
ವಸ್ತುದ್ವಯತ್ರಿಕಂ ತ್ರೇಧಾ ಜ್ಞೇಯಮಿತ್ಥಂ ಮನೀಷಿಭಿಃ ॥

ಪ್ರತಿತಿಂಗಳಿನಲ್ಲಿಯೂ ಒಮ್ಮೆ ಸೂರ್ಯ ಹಾಗೂ ಚಂದ್ರರು ಒಂದೇ ಕಡೆ ಬರುತ್ತಾರೆ. ಈರ್ವರ ಸಂಗಮವಾಗುತ್ತದೆ. ಇವರೀರ್ವರ ಸಂಗಮವಾಗುವುದು ಎಂದರೆ ಇವೆರಡರ

CC-0. Oriental Reasearch Library, Mysore. Digitized by Sri Muthulakshmi Research Academy

"ಯೋಗ". ಹೀಗೆ ಸಂಗಮವಾದಾಗಲೇ ಅಮಾವಾಸ್ಯೆ ಎಂದು ಕರೆಯುತ್ತಾರೆ (ಅಮಾವಾಸ್ಯಾ ತ್ವಮಾವಸ್ಯಾ ದರ್ಶಸ್ಸೂರ್ಯೇಂದು ಸಂಗಮಃ). ಇದೇ ಮೂರನೆಯ ಪ್ರಶ್ನೆಯ ಉತ್ತರ.

೨೦. ದ್ವೇ ಚೇತ್ ಪ್ರಸದ್ಯತಾಂ ತೃಪ್ತಿಃ ದ್ವೌ ನ ಚೇದ್ ಜ್ಞಾಯತಾಂ ಸುಖಮ್ ।
ಪ್ರತೀಕ್ಷಣೀಯೌ ದ್ವೌ ಸರ್ವೈಃ ಶ್ರೀನಿವಾಸಕೃತಂ ಮಹತ್ ॥

(೧) ಮನುಷ್ಯನಿಗೆ ತೃಪ್ತಿಯನ್ನುಂಟುಮಾಡುವ ಎರಡು ವಸ್ತುಗಳಾವುವು ?
(೨) ಯಾವುವು ಎರಡಿದ್ದರೆ ಸುಖವುಂಟಾಗುವುದಿಲ್ಲ ?
(೩) ಎಲ್ಲರಿಂದಲೂ ಯಾವ ಎರಡು ವಿಷಯಗಳು ನಿರೀಕ್ಷಿಸಲ್ಪಡಬೇಕು ? (ಯಾವುದನ್ನು ಜನರು ನಿರೀಕ್ಷಿಸುತ್ತಾರೆ)

೨೧. ದ್ವೇ ಚೇತ್ ಪ್ರಸದ್ಯತಾಂ ತೃಪ್ತಿಃ ಯಥೈವಾನ್ನಂ ತಥಾಂಬರಮ್ ।
ಋಣಂ ಯಥಾ ತಥಾ ರೋಗಃ ದ್ವೌನ ಚೇತ್ ಜ್ಞಾಯತಾಂ ಸುಖಮ್ ॥

ಮನುಷ್ಯಾದಿ ಸಮಸ್ತ ವರ್ಗಗಳಿಗೂ ಹಸಿವಿನ ನಿವಾರಣೆಯನ್ನು ಮಾಡಿಕೊಂಡು ಜೀವಿಸಲು ಅನ್ನವು ಅತ್ಯಂತ ಮುಖ್ಯವಾದುದು; ಹಾಗೆಯೇ ದೇಹರಕ್ಷಣೆಗೆ ಬಟ್ಟೆಯೂ ಬೇಕೇಬೇಕು. ಆಗ ಮಾತ್ರ ಮನುಷ್ಯನಿಗೆ ತೃಪ್ತಿಯುಂಟಾಗುತ್ತದೆ. ಮನುಷ್ಯನ ತೃಪ್ತಿಗೆ ಅತಿಮುಖ್ಯವಾದ ಕಾರಣ ಅನ್ನ, ಬಟ್ಟೆ. ನಂತರ ಮನೆ ಐಶ್ವರ್ಯ ಇತ್ಯಾದಿ ವಿಷಯಗಳು ಕಾರಣವಾಗುತ್ತವೆ.

ಋಣ (ಸಾಲ) ಬಾಧೆಯು ಎಲ್ಲ ಬಾಧೆಗಳಿಗಿಂತಲೂ ತೀವ್ರತರವಾದುದು. ಋಣ ಮನುಷ್ಯನನ್ನು ನಿದ್ರೆಯಲ್ಲೂ ಬಾಧಿಸುತ್ತಿರುತ್ತದೆ. ಹಗಲಿರುಳೂ ಇದರ ಚಿಂತೆಯಿಂದ ಮನುಷ್ಯ ಜೀವಚ್ಛವವಾಗುತ್ತಾನೆ. ಅಂತೆಯೇ ರೋಗದಿಂದ ಪೀಡಿತನಾದವನು ಬದುಕಿದ್ದೂ ನಿಷ್ಪ್ರಯೋಜಕನೆನಿಸುತ್ತಾನೆ. ಆದುದರಿಂದ ಋಣ, ರೋಗ ಎರಡನ್ನೂ ಹೊಂದದೆ ಇರುವವನು ಮಾತ್ರ ಸುಖವನ್ನು ಅನುಭವಿಸಲು ಅರ್ಹನಾಗುತ್ತಾನೆ. ಈ ಎರಡರಿಂದ ಸುಖ ಉಂಟಾಗುವುದಿಲ್ಲ.

೨೨. ಪ್ರತೀಕ್ಷಣೀಯೌ ದ್ವೌ ಸರ್ವೈಃ ದೇಶಕಾಲೌ ವಿವೇಕತಃ ।
ವಸ್ತುದ್ವಯತ್ರಿಕಂ ತ್ರೇಧಾ ಜ್ಞೇಯಮಿತ್ಥಂಮನೀಷಿಭಿಃ ॥

ಪ್ರತಿಯೋರ್ವ ಮನುಷ್ಯನೂ ದೇಶ ಹಾಗೂ ಕಾಲಗಳನ್ನು ಯುಕ್ತಾಯುಕ್ತತೆಯಿಂದ (ಎಚ್ಚರಿಕೆಯಿಂದ) ಗಮನಿಸುತ್ತಾ ತನ್ನ ಸುಖದತ್ತ ಸಾಗಬೇಕು. ಉದಾಹರಣೆಗೆ ಯಾವ ದೇಶದಲ್ಲಿದ್ದರೆ ಅಥವಾ ದೇಶದಲ್ಲಿನ ಯಾವ ಸ್ಥಳದಲ್ಲಿದ್ದರೆ ನಾನು ಸುಖವಾಗಿ ನಿಶ್ಚಿಂತೆಯಿಂದಿರಬಹುದು ಎಂಬ ವ್ಯವಹಾರವನ್ನು ತಿಳಿದು ಅದರ ನಿರೀಕ್ಷಣೆ

CC-0. Oriental Reasearch Library, Mysore. Digitized by Sri Muthulakshmi Research Academy

ಯಲ್ಲಿ ಸಾಗಬೇಕು. ಅಂತೆಯೇ ಎಲ್ಲ ಕಾಲವೂ ಮನುಷ್ಯನ ಕೆಲಸದ ಜಯಕ್ಕೆ ಕಾರಣವಾಗುವುದಿಲ್ಲ. ವಿಘ್ನಪರಂಪರೆಯೇ ಬರಬಹುದು. ಆದುದರಿಂದ ಯಾವ ಕಾಲದಲ್ಲಿ ಮಾಡಿದರೆ ಕಾರ್ಯವು ಕೈಗೂಡಬಹುದು ? ಎಂದು ತಿಳಿದು ಮಾಡಬೇಕು. ಹೀಗೆ ತಕ್ಕ ದೇಶ, ಕಾಲಗಳ ನಿರೀಕ್ಷಣೆಯೇ ಮನುಷ್ಯನಿಗೆ ಸುಖಜನಕವಾಗುತ್ತದೆ.

೨೬. ದ್ವಾಭ್ಯಾಂ ವ್ಯವಸ್ಥಿತೋ ಧರ್ಮೋ ದ್ವಾಭ್ಯಾಂ ಮೋಕ್ಷೋ ವ್ಯವಸ್ಥಿತಃ ।
ದ್ವಾಭ್ಯಾಂ ಕಾಮೋ ಧನಂ ದ್ವಾಭ್ಯಾಂ ಶ್ರೀನಿವಾಸಕೃತಂ ಮಹತ್ ॥

ಹಿಂದಿನಂತೆ ಇಲ್ಲಿಯೂ ಮೂರು ಪ್ರಶ್ನೆಗಳಿವೆ :—

ಯಾವ ಎರಡರಿಂದ ಧರ್ಮವನ್ನು ಶಾಶ್ವತವಾಗಿ ಸಂಪಾದಿಸಬಹುದು ? ಯಾವ ಎರಡರಿಂದ ಮೋಕ್ಷವನ್ನು ಹೊಂದಬಹುದು ? ಕಾಮ ಮತ್ತು ಹಣ (ಐಶ್ವರ್ಯ) ಗಳನ್ನು ಯಾವ ಎರಡು ಮಾರ್ಗಗಳನ್ನು ಅನುಸರಿಸುವುದರಿಂದ ಸಂಪಾದಿಸಬಹುದು ?

೨೭. ದ್ವಾಭ್ಯಾಂ ವ್ಯವಸ್ಥಿತೋ ಧರ್ಮೋ ದಾನೇನಾದರಣೇನ ಚ ।
ಗುರೂಕ್ತಿಸ್ವಾನುಭೂತಿಭ್ಯಾಂ ದ್ವಾಭ್ಯಾಂ ಮೋಕ್ಷೋ ವ್ಯವಸ್ಥಿತ : ॥

ದಾನವನ್ನು ಕೊಡುವುದರಿಂದ ಎಂದರೆ ಉಳ್ಳವರು ಇಲ್ಲದವರಿಗೆ ದಾನವನ್ನು ಕೊಡುವುದರಿಂದ ಮಾತ್ರ ಧರ್ಮವನ್ನು ಗಳಿಸಬಹುದು. ಆದರಲ್ಲಿಯೂ ದಾನವನ್ನು ಕೊಡುವಾಗ ಪ್ರೀತಿಯಿಂದ ಕೊಡಬೇಕು. ಗರ್ವದಿಂದ ಕೊಡಬಾರದು. ಹಾಗೆ ಕೊಟ್ಟರೆ ಧರ್ಮಕ್ಕೆ ಧಕ್ಕೆಯುಂಟಾಗುತ್ತದೆ. ಗರ್ವದಿಂದ ಮಾಡಿದ ದಾನ ದ್ರವ್ಯದ ಕೇಡು ಎಂಬ ಶಿವಶರಣರ ಮಾತಿನಂತೆ ಸುಮ್ಮನೆ ಹಣವನ್ನು ವ್ಯಯ ಮಾಡಿದಂತಾಗುತ್ತದೆ. ಆದುದರಿಂದ ''ದಾನ'' ಹಾಗೂ ಆದರ ಇವೆರಡರ ತಳಹದಿಯಮೇಲೆ ಧರ್ಮದ ಸೌಧವನ್ನು ನಿರ್ಮಿಸಬಹುದಾಗಿದೆ.

ಕೇವಲ ಗುರುಗಳನ್ನು ಸಮೀಪಿಸಿ ಉಪದೇಶವನ್ನು ಪಡೆದ ಮಾತ್ರಕ್ಕೆ ಮೋಕ್ಷವು ಲಭಿಸುವುದಿಲ್ಲ. ಶಿಷ್ಯನು ಶ್ರದ್ಧಾಭಕ್ತಿಗಳಿಂದ ಉಪದೇಶದಲ್ಲಿ ನಂಬಿಕೆಯನ್ನಿಟ್ಟು ನಿಶ್ಚಲ ಮನಸ್ಸಿನಿಂದ ಉಪದೇಶದ ಅನುಷ್ಠಾನವನ್ನು ಮಾಡಿದರೆ ಮಾತ್ರ ಮೋಕ್ಷವನ್ನು ಪಡೆಯಬಹುದು. ಆದ್ದರಿಂದ ಗುರುಗಳ ಉಪದೇಶ ಮತ್ತು ಅದರ ಅನುಷ್ಠಾನವೇ ಮೋಕ್ಷಕ್ಕೆ ಕಾರಣವಾಗುತ್ತದೆ.

೨೮. ಕಾಮಸ್ತು ಲಜ್ಜಾಮಾನಾಭ್ಯಾಂ ಪರ್ಜನ್ಯಾಚ್ಚ ಕೃಷೇರ್ಧನಮ್ ।
ದ್ವಿಚತುಷ್ಕಂ ಚತುರ್ಥಾ ಚ ಜ್ಞೇಯಮಿತ್ಥಂ ಮನೀಷಿಭಿಃ ॥

ನಾಚಿಕೆ ಹಾಗೂ ಅಭಿಮಾನಗಳು ಕಾಮದಲ್ಲಿನ ನೈಜ ಸಂತೋಷಕ್ಕೆ ಹಾಗೂ ಸ್ಥಿರೀಕರಣಕ್ಕೆ ಅನುಕೂಲಕರವಾಗಿರುತ್ತವೆ. ಇವೆರಡು ಇಲ್ಲದ ಕಾಮ ಬಹಳಕಾಲ

CC-0. Oriental Reasearch Library, Mysore. Digitized by Sri Muthulakshmi Research Academy

ಸಂತೋಷವನ್ನೀಯುವುದಿಲ್ಲ. ಕಾಲ ಕಾಲಕ್ಕೆ ಆಗುವ ಮಳೆ ತನ್ಮೂಲಕ ಮಾಡುವ ಕೃಷಿ ಇವುಗಳಿಂದ ಧನ ವೃದ್ಧಿಸುತ್ತದೆ ಇಲ್ಲಿ ನಾಲ್ಕು ಪ್ರಶ್ನೆಗಳಿಗೆ ಉತ್ತರಿಸಲಾಗಿದೆ.

೨೬. ದ್ವೇ ಜಾನಂತಿ ನರಾಃ ಸರ್ವೇ ದ್ವೇ ಜಾನಂತಿ ನರೋತ್ತಮಾಃ ।
ದ್ವೇ ಜಾನನ್ನಸ್ತಿ ವಾ ನೋ ವಾ ಶ್ರೀನಿವಾಸಕೃತಂ ಮಹತ್ ॥

ಸಾಮಾನ್ಯ ಜನರು ಯಾವ ಎರಡು ವಿಷಯಗಳನ್ನು ತಿಳಿದುಕೊಂಡಿರುತ್ತಾರೆ ? ಪುರುಷಶ್ರೇಷ್ಠರು ಸಾಮಾನ್ಯಜನರಿಗಿಂತಲೂ ಬುದ್ಧಿಯಲ್ಲಿ ಮೇಲ್ಮಟ್ಟದಲ್ಲಿರುವವರು ಯಾವ ಎರಡು ವಿಷಯಗಳನ್ನು ತಿಳಿಯುತ್ತಾರೆ ? ಮತ್ತೆ ಎರಡು ವಿಷಯಗಳನ್ನು ಬಹುಶಃ ಯಾರಾದರೂ ತಿಳಿದಿರುವರೋ ಅಥವಾ ಯಾರೂ ತಿಳಿದಿರುವುದಿಲ್ಲವೋ ಆ ಎರಡು ವಿಷಯಗಳು ಯಾವುವು ? ಹೀಗೆ ಮೂರು ಪ್ರಶ್ನೆಗಳು.

೨೭. ದ್ವೇ ಜಾನಂತಿ ನರಾಃ ಸರ್ವೇ ಅಶನಂ ಶಯನಂ ತಥಾ ।
ಶ್ರವಣಂ ಮನನಂ ಚೈವ ದ್ವೇ ಜಾನಂತಿ ನರೋತ್ತಮಾಃ ॥

ಇಲ್ಲಿ ಕವಿಯು ಜನಸಮುದಾಯವನ್ನು ಸಾಮಾನ್ಯರು ಮತ್ತು ಶ್ರೇಷ್ಠರು ಎಂಬುದಾಗಿ ವಿಂಗಡಿಸಿದ್ದಾನೆ. ಸಾಮಾನ್ಯ ಜನರು ತಮಗೆ ಸದ್ಯ ತೃಪ್ತಿಯೆನಿಸಿದ ಅನ್ನ ಹಾಗೂ ಶಯನಗಳೇ ಜೀವನದ ಸರ್ವಸ್ವವೆಂದು ತಿಳಿದಿರುತ್ತಾರೆ. ಇಹಲೋಕದ ಸುಖವನ್ನು ಬಿಟ್ಟು ಇವರಿಗೆ ಪರಲೋಕದ (ಮೋಕ್ಷದ) ಶಾಶ್ವತ ಸುಖದತ್ತ ಮನಸ್ಸು ಹರಿಯುವುದಿಲ್ಲ.

ಆದರೆ ಇವರಿಗಿಂತ ಮೇಲ್ಮಟ್ಟದ ಪುರುಷಶ್ರೇಷ್ಠರು ಇಹಲೋಕದ ಅಶಾಶ್ವತ ಸುಖಕ್ಕೆ ಹೆಚ್ಚಿನ ಪ್ರಾಮುಖ್ಯವನ್ನು ಕೊಡದೆ ಮೋಕ್ಷಮಾರ್ಗಕ್ಕೆ ಅವಶ್ಯವೆನಿಸಿದ ವೇದೋಪನಿಷತ್ತುಗಳನ್ನು ಕೇಳುವುದು ಹಾಗೂ ಆ ಬಗ್ಗೆ ಆಳವಾಗಿ ಆಲೋಚಿಸುತ್ತಾ ಬ್ರಹ್ಮ ಸಾಕ್ಷಾತ್ಕಾರದತ್ತ ಸಾಗುತ್ತಾರೆ.

೨೮. ದ್ವೇ ಜಾನನ್ನಸ್ತಿ ವಾ ನೋ ವಾ ಭಾಗಧೇಯಂ ಕವೇಶ್ಚ ಹೃತ್ ।
ವಸ್ತುದ್ವಯತ್ರಿಕಂ ತ್ರೇಧಾ ಜ್ಞೇಯಮಿತ್ಥಂ ಮನೀಷಿಭಿಃ ॥

ಪ್ರಥಮ ಕ್ರಮದ ಕೊನೆಯಲ್ಲಿ ಬಹುಶಃ ಕವಿಯು ತನ್ನ ಸಿದ್ಧಾಂತವನ್ನು ಅಥವಾ ಸಂದೇಶವನ್ನು ತಿಳಿಸಿರುತ್ತಾನೆ. ಮೇಲೆ ಹೇಳಿದಂತೆ ಸಾಮಾನ್ಯ ಮನುಷ್ಯರು ಹಾಗೂ ಉತ್ತಮ ಮನುಷ್ಯರು ಇಹ ಪರಗಳೆರಡರಲ್ಲಿನ ಸರ್ವ ವಿಷಯಗಳನ್ನು ತಿಳಿದುಕೊಳ್ಳಲು ಶಕ್ತರಾಗಿರಬಹುದು. ಆದರೆ ಅವರು ಅದೃಷ್ಟ ಹಾಗೂ ಕವಿಯ ಹೃದಯವನ್ನು ಮಾತ್ರ ತಿಳಿಯಲಾರರು ಎಂದು ಸಂದೇಹಿಸುತ್ತಾನೆ. ಏಕೆಂದರೆ ಹೆಸರೇ ಸೂಚಿಸುವಂತೆ ಅದೃಷ್ಟ ಕಣ್ಣಿಗೆ ಕಾಣಿಸುವಂತಹುದಲ್ಲ ಮತ್ತು 'ನಾನೃಷಿಃ ಕುರುತೇ ಕಾವ್ಯಂ' ಎಂಬ ಉಕ್ತಿಯಂತೆ ತ್ರಿಕಾಲಜ್ಞಾನಿಗಳಾದ ಋಷಿಗಳಂತೆಯೇ ಕವಿಯೂ

CC-0. Oriental Reasearch Library, Mysore. Digitized by Sri Muthulakshmi Research Academy

ಸರ್ವಜ್ಞನಾಗಿರುತ್ತಾನೆ. ಆದ್ದರಿಂದ ಇವೆರಡನ್ನೂ ಯಾವವರ್ಗದ ಮನುಷ್ಯರೇ ಆಗಲಿ ತಿಳಿಯಲು ಅಸಮರ್ಥರೇ ಆಗಿರಬಹುದು ಎಂದು ಸಂದೇಹಿಸಿರುತ್ತಾನೆ.

ಪಂಚಾಶತ್ಪ್ರಶ್ನಿಕಾಮೇತಾಂ ಪ್ರಸ್ತಾವವಿಹಿತೋತ್ತರಾಮ್ ।
ಶ್ರೀನಿವಾಸೇನ ಕಥಿತಾಂ ಸ್ವೀಕುರ್ವಂತು ಮನೀಷಿಣಃ ॥

ಕಡೆಯಲ್ಲಿ ಶ್ರೀನಿವಾಸಕವಿಯು ರಚಿಸಿರುವ ಐವತ್ತು ಪ್ರಶ್ನೆ ಹಾಗೂ ಉತ್ತರಗಳುಳ್ಳ ಪ್ರಥಮ ಕ್ರಮವನ್ನು ವಿದ್ವಾಂಸರು ಸ್ವೀಕರಿಸಲಿ ಎಂದು ಹೇಳಿರುತ್ತಾನೆ.

## ಎರಡನೆಯ ಕ್ರಮ

೧. ಯಾ ಸ್ಯಾದ್ವಿಶೇಷಗಣಿತಾ ಸಕಲೈರ್ದೇಶಾಧಿಪೈಶ್ಚ ದಿಕ್ಪತಿಭಿಃ ।
ತಾಂ ಶ್ರೀನಿವಾಸಕವಿರಥ ಪ್ರಶ್ನಾಭಿನ್ನೋತ್ತರಾವಲಿಂ ಭಣತಿ ॥

ಸಮಸ್ತದೇಶದ ರಾಜರುಗಳು ಹಾಗೂ ದಿಕ್ಪತಿಗಳಿಂದ ಗೌರವಿಸಲ್ಪಟ್ಟ ಪ್ರಶ್ನಾಭಿನ್ನೋತ್ತರಾವಳಿಯು ಶ್ರೀನಿವಾಸಕವಿಯಿಂದ ರಚಿಸಲ್ಪಟ್ಟಿದೆ. ಎರಡನೆಯ ಕ್ರಮದಲ್ಲಿ ಪ್ರಶ್ನೆ ಹಾಗೂ ಉತ್ತರ ವಾಕ್ಯಗಳು ಒಂದೇ ಆಗಿರುತ್ತವೆ.

೨. ಮಾನಾಯಕಃ ಪ್ರಭುಸ್ಸೇವ್ಯಃ ಕಾಮನಾಗ್ಲಾನಿರುಜ್ಝ್ಯತಾಮ್ ।
ಲಕ್ಷ್ಮ್ಯಾಃ ಕಂಜಗೃಹೇ ವಾಸಂ ಕಿಂನರೇಶಪದಂ ಮಹತ್ ॥

ಮೊದಲನೆಯ ವಾಕ್ಯದಲ್ಲಿ ಮಾನಾಯಕಃ ಪ್ರಭುಃ ಸೇವ್ಯಃ–ಗೌರವಕ್ಕೆ ಯಾವ ಸ್ವಾಮಿಯನ್ನು ಸೇವಿಸಬೇಕು ಎಂಬುದು ಪ್ರಶ್ನೆ. ಮಾನಾಯಕಃ ಪ್ರಭುಃ ಸೇವ್ಯಃ— ದೇವನಾದ ಲಕ್ಷ್ಮೀಪತಿಯನ್ನು ಸೇವಿಸಬೇಕು ಎಂಬುದು ಉತ್ತರ. ಹೀಗೆ ಒಂದೇ ವಾಕ್ಯದಲ್ಲಿ ಪ್ರಶ್ನೆ ಹಾಗೂ ಉತ್ತರಗಳಿರುವುದನ್ನು ಸಭಂಗಶ್ಲೇಷರೂಪದಲ್ಲಿ ಕೊಟ್ಟಿರುವುದನ್ನು ನೋಡಬಹುದು.

ಕಾ ಮನಾಕ್ ಗ್ಲಾನಿಃ ಉಜ್ಝ್ಯತಾಂ – ಯಾವ ಚಿಂತೆಯನ್ನು ಬಿಡಬೇಕು ?

ಕಾಮನಾಗ್ಲಾನಿಃ ಉಜ್ಝ್ಯತಾಂ — ಆಸೆಯಿಂದ ಬರತಕ್ಕ ಮನಸ್ಸಿನ ದೌರ್ಬಲ್ಯವನ್ನು ಬಿಡತಕ್ಕದ್ದು (ಕಾಮನಯಾ–ವಾಂಛಯಾ)

ಲಕ್ಷ್ಮ್ಯಾಃ ಕಂ ಜಗೃಹೇ ವಾಸಂ — ಲಕ್ಷ್ಮಿಯು ಯಾವುದನ್ನು ವಾಸಸ್ಥಾನವನ್ನಾಗಿ ಸ್ವೀಕರಿಸಿದ್ದಾಳೆ ?

ಲಕ್ಷ್ಮ್ಯಾಃ ಕಂಜಗೃಹೇ ವಾಸಂ—ಲಕ್ಷ್ಮಿಯು ಕಮಲವನ್ನು ತನ್ನ ವಾಸಸ್ಥಾನವನ್ನಾಗಿ ಸ್ವೀಕರಿಸಿದ್ದಾಳೆ.

CC-0. Oriental Reasearch Library, Mysore. Digitized by Sri Muthulakshmi Research Academy

ಕಿಂ ನರೇಶಪದಂ ಮಹತ್—ಅತಿಶ್ರೇಷ್ಠವಾದ ರಾಜನ ಅಧಿಷ್ಠಾನ(ಸ್ಥಾನ) ಯಾವುದು ?

ಕಿನ್ನರೇಶಪದಂ ಮಹತ್—ಕುಬೇರನ ಸ್ಥಾನವೇ ಶ್ರೇಷ್ಠವಾದುದು.

೩. ಕಾ ಶಾಸನೇ ತಪಃ ಸಿದ್ಧಿಃ ಕೇಶಾಂತ ತನು ಬುದ್ಧಯಃ ।
ಕಾ ಶ್ಯಾಮಾರಾಧ್ಯತಾಂ ಕಾಳೀ ಪ್ರಾಹುಃ ಕಂ ಕಾಲಹಾರಿಣಮ್ ॥

ಈ ಶ್ಲೋಕದಲ್ಲಿ ನಾಲ್ಕು ಪಾದಗಳಲ್ಲಿಯೂ ನಾಲ್ಕು ಪ್ರಶ್ನೆಗಳಿದ್ದು ಉತ್ತರವೂ ಆಯಾ ಪ್ರಶ್ನೆಯಲ್ಲಿಯೇ ಅಡಕವಾಗಿರುವುದನ್ನು ಗಮನಿಸಬಹುದು.

ಕಾ ಶಾಸನೇ ತಪಃ ಸಿದ್ಧಿಃ-ನಿಗ್ರಹಾನುಗ್ರಹಸಿದ್ಧಿಗೆ ಕಾರಣವಾದ ತಪಸ್ಸನ್ನು ಹೇಗೆ ಮಾಡಬೇಕು ? (ಅಂತಹ ತಪಸ್ಸು ಯಾವುದು ?). ಕಾಶಾಸನೇ ತಪಸ್ಸಿದ್ಧಿಃ-ಪವಿತ್ರವಾದ ದರ್ಭೆಯನ್ನೇ ಆಸನವನ್ನಾಗಿ ಮಾಡಿಕೊಂಡು ಆಚರಿಸುವುದರಿಂದ ಬರುವ ತಪಸ್ಸಿದ್ಧಿಯು ನಿಗ್ರಹಾನುಗ್ರಹಕ್ಕೆ ಕಾರಣವಾಗುತ್ತದೆ.

ಕೇ ಶಾಂತತನುಬುದ್ಧಯಃ—ಶರೀರವೇ ಆತ್ಮ, ಶರೀರವೇ ನಾನು ಎಂಬ ಮಮಕಾರವಿಲ್ಲದವರು ಯಾರು ? ಇದು ಪ್ರಶ್ನೆ. ಕೇಶಾಂತ ತನುಬದ್ಧಯಃ—ಕೂದಲಿನ ಅಗ್ರಭಾಗದಂತೆ ಸೂಕ್ಷ್ಮವಾದ ಬುದ್ಧಿಯುಳ್ಳವರು ಎಂದರೆ ಯುಕ್ತಾಯುಕ್ತವಿವೇಚನೆಯಿಂದ ಆಲೋಚಿಸುವ ಸೂಕ್ಷ್ಮಮತಿಗಳು ಮಾತ್ರ ಶರೀರವೇ ಆತ್ಮವಲ್ಲ, ಆತ್ಮನೇ ಬೇರೆ ಎಂದು ತಿಳಿಯುತ್ತಾರೆ. ಕಾ ಶ್ಯಾಮಕಾಳೀ ಆರಾಧ್ಯತಾಂ—ಯಾವ ಪಾರ್ವತಿಯು (ಕಾಳಿಯು) ಆರಾಧಿಸಲ್ಪಡುತ್ತಾಳೆ. ಕಾಶ್ಯಾಂ ಆರಾಧ್ಯತಾಂ ಕಾಳೀ—ಕಾಶಿಯಲ್ಲಿರುವ ಪಾರ್ವತಿಯು ಪೂಜಿಸಲ್ಪಡುತ್ತಾಳೆ. (ಕಾಶೀಕ್ಷೇತ್ರದ ಮಹಾತ್ಮೆಯಿಂದ ಅಲ್ಲಿರುವ ಕಾಳಿಯನ್ನು ಆರಾಧಿಸಿದರೆ ಜಾಗ್ರತೆ ಪ್ರಸನ್ನಳಾಗುತ್ತಾಳೆ ಎಂಬ ನಂಬಿಕೆ ಇದೆ.)

ಪ್ರಾಹುಃ ಕಂ ಕಾಲಹಾರಿಣಂ-ಯಾರನ್ನು ಮೃತ್ಯುನಿವಾರಕ (ಮೃತ್ಯುಂಜಯ)ನೆಂದು ಕರೆಯುತ್ತಾರೆ ? (ಕಾಲಹಾರೀ = ಮೃತ್ಯುನಿವಾರಕ)

ಪ್ರಾಹುಃ ಕಂಕಾಲ ಹಾರಿಣಮ್-ಅಸ್ಥಿಮಾಲೆಯನ್ನು (ರುಂಡಮಾಲೆಯನ್ನು) ಹಾರದಂತೆ ಧರಿಸಿರುವ ಪರಮೇಶ್ವರನನ್ನು ಮೃತ್ಯುನಿವಾರಕನೆಂದು ಕರೆಯುತ್ತಾರೆ. (ಕಂಕಾಲ = ರುಂಡಮಾಲೆ). ಹೀಗೆ ಯಾವುದು ಪ್ರಶ್ನೆಯೋ ಅದೇ ವಾಕ್ಯವು ಭಿನ್ನ ರೀತಿಯಲ್ಲಿ ಪದಚ್ಛೇದ ಮಾಡಿದಾಗ ಉತ್ತರವೂ ಆಗುವುದು.

೪. ಕುತೋ ದರ್ಪೋ ನರೇಂದ್ರಾಣಾಂ ಕೋದಂಡನಿಪುಣೋ ನೃಪಃ ।
ರಾಜಪೂಜ್ಯಾಃಕೇತುಪಟಾಃ ಕಾರಣಾಧ್ಯಾ ಚಮೂರ್ಜಯೇತ್ ॥

ಕುತೋ ದರ್ಪೋ ನರೇಂದ್ರಾಣಾಂ—ರಾಜರುಗಳಿಗೆ ದರ್ಪವು (ಅಹಂಕಾರವು) ಬರಲು ಕಾರಣವೇನು ? ಕುತಃ ದರ್ಪಃನರೇಂದ್ರಾಣಾಂ–(ಕು ಎಂದರೆ ಭೂಮಿ) ವಿಶಾಲವಾದ

CC-0. Oriental Reasearch Library, Mysore. Digitized by Sri Muthulakshmi Research Academy

ಭೂಭಾಗವನ್ನು ನಿಗ್ರಹಾನುಗ್ರಹವುಳ್ಳವರಾಗಿ ಆಳುತ್ತಿರುವುದರಿಂದ ರಾಜರು ದರ್ಪದಿಂದ ಕೂಡಿರುತ್ತಾರೆ. ಕೋ ದಂಡನಿಪುಣಃ ನೃಪಃ - ಸಾಮ, ದಾನ, ಭೇದೋ-ಪಾಯಗಳಿಂದ ಭಿನ್ನವಾದ ದಂಡೋಪಾಯ (ಶಿಕ್ಷೆ)ದಲ್ಲಿ ನಿಪುಣನಾದ ರಾಜನು ಯಾರು ? ಕೋದಂಡ ನಿಪುಣಃ ನೃಪಃ—ಧನುರ್ವಿದ್ಯಾನಿಪುಣನಾದ ರಾಜನು ಮಾತ್ರ ದಂಡೋಪಾಯದಲ್ಲಿ ಚತುರತೆಯುಳ್ಳವನಾಗಬಲ್ಲನು, ಅಂದರೆ, ಸಾಮ, ದಾನ, ಭೇದಗಳಿಂದ ಸರಿಪಡಿಸಲಾಗದ ಶತ್ರುವನ್ನು ಬಿಲ್ಲುವಿದ್ಯೆಯಲ್ಲಿ ಸಮರ್ಥನಾದವನು ಮಾತ್ರ ನಿಗ್ರಹಿಸಬಲ್ಲ.

ರಾಜಪೂಜ್ಯಾ ಪಟಾಸ್ತು ಕೇ—ರಾಜನಿಂದ ಪೂಜಿಸಲ್ಪಡುವ (ಗೌರವಿಸಲ್ಪಡುವ) ವಸ್ತ್ರಗಳು ಯಾವುದು ? ಕೇತುಪಟಾಃ ರಾಜಪೂಜ್ಯಾಃ - ಧ್ವಜವಸ್ತ್ರಗಳು ರಾಜನಿಂದ ಗೌರವಿಸಲ್ಪಡುತ್ತವೆ. ರಾಜರುಗಳು ಯುದ್ಧಕ್ಕೆ ಹೋಗುವಾಗ ಜಯ ಶಾಲಿಗಳಾಗಬೇಕೆಂಬ ಇಚ್ಛೆಯಿಂದ ಧ್ವಜಕ್ಕೆ ಪೂಜಿಸುತ್ತಾರೆ. ಸಭೆ ಸಮಾರಂಭಗಳಲ್ಲಿ ಧ್ವಜವು ಪೂಜೆಗೊಳಗಾಗುತ್ತದೆ.

ಕಾ ರಣಾಢ್ಯಾ ಚಮೂಃ ಜಯೇತ್—ಯುದ್ಧ ಚಾತುರ್ಯವುಳ್ಳ ಯಾವ ಸೈನ್ಯವು ಜಯಶಾಲಿಯಾಗಬಲ್ಲದು ? ಕಾರಣ-ಆಢ್ಯಾ ಚಮೂಃಜಯೇತ್—ಆಯಾ ದೇಶಕಾಲಗಳಲ್ಲಿ ಎಂದರೆ ಯಾವ ದೇಶದಲ್ಲಿ ಅಥವಾ ಯಾವ ಪ್ರದೇಶದಲ್ಲಿ (ಬೆಟ್ಟಗುಡ್ಡ ಪ್ರದೇಶ ಹಾಗೂ ಮೈದಾನ ಪ್ರದೇಶಗಳಿರಬಹುದು ಅಥವಾ ಬೇರೆ ಬೇರೆ ಸಂಗಡದ ದೇಶಗಳಿರಬಹುದು) ಕಾಲ ಎಂದರೆ ಛಳಿಗಾಲ, ಮಳೆಗಾಲವಿರಬಹುದು. ಏನೇ ಇರಲಿ ಆಯಾ ದೇಶಗಳಿಗೆ ಆಯಾ ಕಾಲಗಳಲ್ಲಿ ಯಾವ ಯಾವ ಯುದ್ಧೋಪಕರಣಗಳನ್ನು ಉಪಯೋಗಿಸಿದರೆ ಜಯಗಳಿಸಬಹುದು ಎಂಬುದಾಗಿ ಆಯಾ ಸಾಧನಗಳಿಂದ (ಆಢ್ಯಾ) ಸಮೃದ್ಧಿ ಹೊಂದಿರುವ ಸೈನ್ಯವು ಮಾತ್ರ ಜಯಶಾಲಿಯಾಗಬಲ್ಲದು. (ಚಮೂಃ ಸೈನ್ಯ). ಹೀಗೆ ಪ್ರತಿಯೊಂದು ಶ್ಲೋಕದಲ್ಲಿಯೂ ನಾಲ್ಕು ಪ್ರಶ್ನೆಗಳು ಇದ್ದು ಸಂದರ್ಭೋಚಿತ ವಾಗಿ ಪದಚ್ಛೇದಮಾಡಿದಾಗ ಉತ್ತರವೂ ಇರುವುದನ್ನು ಗಮನಿಸಬಹುದು.

೫. ಕೇ ಬಲಾಢ್ಯಾಃ ಪ್ರಶಂಸ್ಯಂತಾಂ ಕಾಮಿತೋಕ್ತಿರ್ಹಿತಾಭವೇತ್ ।
ಕಿಂ ಕರಸ್ಥಂಧನಂ ಕಾರ್ಯಂ ಕಾಮಾನ್ಯಾ ಪ್ರೀತಿರೇಧತೇ ॥

ಕೇ ಬಲಾಢ್ಯಾಃ ಪ್ರಶಂಸ್ಯಂತಾಂ—ಯಾವ ಶೂರರು ಹೊಗಳಿಸಿಕೊಳ್ಳಲ್ಪಡುತ್ತಾರೆ ? (ಜನರು ಯಾರನ್ನು ಹೊಗಳುತ್ತಾರೆ ?) ಕೇವಲಾಢ್ಯಾಃ ಪ್ರಶಂಸ್ಯತಾಂ—ಅತ್ಯಂತ ಸಂಪನ್ನ (ಗುಣಶಾಲಿ) ಜನರು ಹೊಗಳಿಕೆಗೆ ಅರ್ಹರಾಗುತ್ತಾರೆ. ಸಂಸ್ಕೃತದಲ್ಲಿ ಬ ಕಾರ ವಕಾರಗಳಿಗೆ ವ್ಯತ್ಯಾಸವಿಲ್ಲ. ಕೇಬಲಾಢ್ಯಾ ಎಂಬುದರಲ್ಲಿನ ಬಕಾರವನ್ನು ವ ಎಂದು ಪರಿಗಣಿಸಲಾಗಿದೆ (ಆಢ್ಯಾಃ—ಶ್ರೀಮಂತರು.)

CC-0. Oriental Reasearch Library, Mysore. Digitized by Sri Muthulakshmi Research Academy

ಕಾ ಮಿತಾ ಉಕ್ತಿಃ ಹಿತಾಭವೇತ್-ಯಾವ ಸಂಕ್ಷಿಪ್ತವಾದ ಮಾತು ಹಿತವಾಗಿ ಪರಿಣಮಿಸುತ್ತದೆ? ಕಾಮಿತಾ ಉಕ್ತಿಃ ಹಿತಾಭವೇತ್-ನಾವು ಮನಸ್ಸಿನಲ್ಲಿ ಬಯಸಿದ್ದನ್ನೇ ಮತ್ತೊಬ್ಬರು ಹೇಳಿದರೆ ಅಂತಹ ಮಾತು ಹಿತವಾಗುತ್ತದೆ. ನಮ್ಮ ಇಚ್ಛೆಗೆ ಅನುಗುಣವಾದ ಮಾತು ಇಷ್ಟವಾಗುತ್ತದೆ.

ಕಿಂ ಕರಸ್ಥಂ ಧನಂ ಕಾರ್ಯಂ-ಕೈಯಲ್ಲಿರುವ ಹಣವು ಯಾವುದಕ್ಕೆ ಉಪಯೋಗವಾಗಿಸಿದರೆ ಸಾರ್ಥಕವಾಗುತ್ತದೆ? (ಹಣವೇ ಕಾರಣವಾದರೆ ಅದಕ್ಕೆ ತಕ್ಕ ಕಾರ್ಯ ಯಾವುದಾಗಬೇಕು.)? ಕಿಂಕರಸ್ಥಂ ಧನಂ ಕಾರ್ಯಂ-ಸೇವಕರ ಹಿತಕ್ಕೋಸ್ಕರ ಉಪಯೋಗಿಸಿದ ಹಣ ಸಾರ್ಥಕವಾಗುತ್ತದೆ. (ಹಣವು ತನ್ನ ಕಾರ್ಯವನ್ನು ಮಾಡಿದಂತಾಗುತ್ತದೆ.)

ಕಾ ಮಾನ್ಯಾ ಪ್ರೀತಿಃ ಏಧತೇ—ಯಾವುದು ಗೌರವಯುತವಾದ ಪ್ರೀತಿಯನ್ನು ಹೊಂದಲು ಕಾರಣವಾಗುತ್ತದೆ? ಕಾಮಾನ್ಯಾಪ್ರೀತಿಃ ಏಧತೇ (ಕಾಮಾದ್ ಅನ್ಯಾ ಕಾಮಾನ್ಯಾ) ಆಸೆಯನ್ನು ತೃಪ್ತಿಗೊಳಿಸಿಕೊಳ್ಳುವುದಕ್ಕೋಸ್ಕರ ಯಾಚಿಸುವುದಕ್ಕೆ ಹೊರತಾದದ್ದು ಪ್ರೀತಿಯನ್ನು ಗಳಿಸಲು ಕಾರಣವಾಗುತ್ತದೆ, ಪ್ರೀತಿಯ ವೃದ್ಧಿಗೆ ಕಾರಣವಾಗುತ್ತದೆ. "ಯಾಚನೆಗಿಂತ ಲಘುತರವಿಲ್ಲ" ಎಂಬ ಉಕ್ತಿಯಂತೆ, ಬೇಡುವವನನ್ನು ಯಾರೂ ಪ್ರೀತಿಸುವುದಿರಲಿ ಹತ್ತಿರಕ್ಕೂ ಸೇರಿಸುವುದಿಲ್ಲ ಆದುದರಿಂದ ಯಾಚನೆಗಿಂತ ವ್ಯತಿರಿಕ್ತವಾದುದು ಮಾತ್ರ ಪ್ರೀತಿಜನಕವಾಗುತ್ತದೆ.

೬. ರಹಸ್ಯೇಕಸ್ಸಖಾ ಗ್ರಾಹ್ಯೋ ಭಾವಿಕಾನಿರ್ಣಯೇನ್ಮತಿಃ ।
ಕೋಪಕಾರೀ ನ ಸಂಭಾಷ್ಯಃ ಸುರಾಪಂಕೋವಶಂನಯೇತ್ ॥

ರಹಸ್ಯೇ ಕಃಸಖಾ ಗ್ರಾಹ್ಯಃ—ಏಕಾಂತದಲ್ಲಿ ವ್ಯವಹರಿಸುವಾಗ ಎಷ್ಟು ಜನರನ್ನು ಅಥವಾ ಯಾರನ್ನು ನಂಬುಗೆಯ ಸ್ನೇಹಿತನೆಂದು ತಿಳಿಯಬೇಕು? ರಹಸಿ ಏಕಃ ಸಖಾ ಗ್ರಾಹ್ಯಃ-ಸ್ನೇಹಿತರು ಎಷ್ಟೇ ಇದ್ದರೂ ಏಕಾಂತದಲ್ಲಿ ಮಾತ್ರ ಅತ್ಯಂತ ನಂಬುಗೆಯ ಓರ್ವ ಸ್ನೇಹಿತನನ್ನು ಗುರುತಿಸಿ ಅವನೊಡನೆ ಸಮಾಲೋಚಿಸಬೇಕು.

ಕಾ ಮತಿಃ ಭಾವಿ ನಿರ್ಣಯೇತ್—ಯಾವ (ವಿಧವಾದ) ರೀತಿಯಾದ ಬುದ್ಧಿಯು (ಮುಂದೆ ಹೀಗಿಯೇ ಆಗುತ್ತದೆ ಎಂದು) ನಿರ್ಣಯಾತ್ಮಕವಾಗಿ ನಿಶ್ಚಯಿಸಬಲ್ಲದು? ಈ ಪ್ರಶ್ನೆಗೆ ಉತ್ತರ – ಭಾವಿಕಾ ಮತಿಃ ನಿರ್ಣಯೇತ್-ರಸಜ್ಞಾನವುಳ್ಳ ಬುದ್ಧಿಯು ಅಥವಾ ತೀಕ್ಷ್ಣಬುದ್ಧಿಯು ಮಾತ್ರ ಇದಮಿತ್ಥಂ ಎಂಬ ಜ್ಞಾನಕ್ಕೆ ಕಾರಣವಾಗಬಲ್ಲದು.

ಕಃ ಅಪಕಾರೀ ನ ಸಂಭಾಷ್ಯಃ-ಯಾವ ಅಪಕಾರಿಯೊಡನೆ ಮಾತನಾಡಬಾರದು ಹಾಗೂ ಸ್ನೇಹವನ್ನು ಬೆಳೆಸಬಾರದು? ಕೋಪಕಾರೀ ನ ಸಂಭಾಷ್ಯಃ-ಕ್ರೋಧವುಳ್ಳ ಶೀಘ್ರಕೋಪಿಯಾದ ದುಷ್ಟರೊಡನೆ ಸಂಭಾಷಣೆಯನ್ನು ಮಾಡಬಾರದು. ಕೋಪವೇ ಎಲ್ಲ ಅಪಕಾರಗಳಿಗೂ ಮೂಲವಾಗಿರುತ್ತದೆ.

CC-0. Oriental Reasearch Library, Mysore. Digitized by Sri Muthulakshmi Research Academy

ಸುರಾಪಂ ಕಃ ವಶಂ ನಯೇತ್-ಮದ್ಯಪಾನ ಮಾಡತಕ್ಕವನು ಯಾರ ವಶವಾಗುತ್ತಾನೆ ಅಂದರೆ ಅವನನ್ನು ಯಾರು ವಶಮಾಡಿಕೊಳ್ಳಬಲ್ಲರು ? ಸುರ ಇವ ಅಪಂಕಃ ನಿಷ್ಪಾಪಃ ವಶಂ ನಯೇತ್-ಎಂದರೆ ಅಪಂಕಃ ಸುಕೃತಿಯು ಅಥವಾ ಪುಣ್ಯಶಾಲಿಯು ಮಾತ್ರ ವಶಪಡಿಸಿಕೊಳ್ಳಲು ಸಮರ್ಥನಾಗುತ್ತಾನೆ. ಅಥವಾ ಸುರೆಯಲ್ಲಿರುವ ಪಂಕಃ ಮತ್ತನ್ನು ಬರಿಸುವ ವಿಶೇಷ ದ್ರವವು ಅವನನ್ನು ತನ್ನ ಅಧೀನದಲ್ಲಿಟ್ಟುಕೊಳ್ಳುತ್ತದೆ (ಹೀಗೆ ಎರಡು ಅರ್ಥಗಳಿವೆ).

೭. ಅವಶಂ ಕಾಂ ಭಜೇನ್ಮೂರ್ಖಃ ಕಾಚಕಾಂತಿಃ ಕನೀಯಸೀ ।
ಆರ್ತಃ ಕಾಂತಾರಯೇದ್ವಾಂಛಾಂ ಧೂರ್ತಧೀಃ ಕಾಸರೇದ್ ಬಹಿಃ ।

ಅವಶಂ ಕಾಂ ಭಜೇತ್ ಮೂರ್ಖಃ-ಮೂರ್ಖನು ದುಷ್ಟಸ್ವಭಾವವುಳ್ಳವನು ಯಾರ ವಶಕ್ಕೂ ಒಳಪಡದೆ (ಸ್ವೇಚ್ಛೆಯಿಂದ) ಯಾವುದನ್ನು ಮಾಡುತ್ತಾನೆ ? ಅವಶಂ ಕಾಂ ಭಜೇತ್ ಮೂರ್ಖಃ-ದುಷ್ಟನು ಸದಾ ದುಷ್ಕೃತ್ಯವನ್ನೇ ಎಸಗುತ್ತಾನೆ. ಕೆಟ್ಟಕೆಲಸ-ಗಳಲ್ಲೇ ತೊಡಗುತ್ತಾನೆ.

ಕನೀಯಸೀ ಕಾಂತಿಃ ಕಾ-ಕನಿಷ್ಠವಾದ ಶ್ರೇಷ್ಠವಲ್ಲದ ಕಾಂತಿಯುಳ್ಳದ್ದು ಯಾವುದು ? ಕಾಚಕಾಂತಿಃ ಕನೀಯಸೀ-ಸಾಧಾರಣವಾದ ಗಾಜಿನ ಕಾಂತಿಯು ಕನಿಷ್ಠವಾದುದು. ಬೇರೆಕಾಂತಿಯುಕ್ತವಾದ ಲೋಹಗಳಿಗೆ ಹೋಲಿಸಿದಾಗ ಸಾಧಾರಣ ಗಾಜಿನ ಕಾಂತಿಯು ಅತ್ಯಂತ ಮ್ಲಾನವಾಗಿರುತ್ತದೆ.

ಆರ್ತಃ ಕಾಂ ವಾಂಛಾಂ ತಾರಯೇತ್-ವ್ಯಾಧಿಪೀಡಿತನಾದವನು ಅಥವಾ ಸಂಕಟಕ್ಕೆ ಒಳಗಾದವನು ಯಾವ ಆಸೆಯನ್ನು ಹೇಗೆ ದಾಟಬೇಕು ? ಮನಸ್ಸಿನಲ್ಲಿರುವ ಆಸೆ ಆಕಾಂಕ್ಷೆಗಳನ್ನು ಹೇಗೆ ನಿಯಂತ್ರಿಸಿಕೊಳ್ಳಬೇಕು. ಆರ್ತಃ ವಾಂಛಾಂ ಕಾಂತಾರಯೇತ್-ರೋಗ ಪೀಡಿತನಾದವನು ಮನಸ್ಸಿನಲ್ಲಿ ವೃದ್ಧಿಯಾಗುತ್ತಿರುವ ತನ್ನ ಆಸೆಗಳನ್ನು ಕಾಂತಾರ ಇವ ಕಾಡಿನಂತೆ ತಾರಯೇತ್ ದಾಟಬೇಕು, ಕಾಡಿನಲ್ಲಿ ಸಂಚರಿಸುವಾಗ ನಾವು ಎಷ್ಟು ಜಾಗರೂಕರಾಗಿದ್ದು ಅದನ್ನು ದಾಟುತ್ತೇವೋ ಹಾಗೆ ನಾವು ಸಂಕಟಕ್ಕೊಳಗಾದಾಗ ನಮ್ಮ ಆಸೆಗಳನ್ನು ಅದುಮಿಟ್ಟುಕೊಂಡು ಮುಂದೆ ಹೋಗಬೇಕು.

ಧೂರ್ತಧೀಃ ಕಾ ಸರೇತ್ ಬಹಿಃ—ಯುಕ್ತಾಯುಕ್ತ ವಿವೇಚನೆ ಇಲ್ಲದ ಯಾವ ಬುದ್ಧಿಯನ್ನು ದಾಟಬೇಕು ಅಥವಾ ಬಿಡಬೇಕು ? ಯುಕ್ತಾಯುಕ್ತ ವಿವೇಚನೆ ಇಲ್ಲದೆ ಮನುಷ್ಯನ ಬುದ್ಧಿಯು ಯಾವುದನ್ನೂ ಆಲೋಚಿಸದೆ ದೊಡ್ಡ ಹೊಂಡದಲ್ಲಿ ಬಿದ್ದು ಪರಿತಪಿಸುವ ಎಮ್ಮೆ (ಕಾಸರ)ಯಂತೆ (ನಿಷ್ಫಲ) ತೊಂದರೆಗೊಳಗಾಗುವಂತಹ ಬುದ್ಧಿಯನ್ನು ಬಿಡಬೇಕು.

CC-0. Oriental Reasearch Library, Mysore. Digitized by Sri Muthulakshmi Research Academy

೮. ಕೌಶಲ್ಯದೌಸ್ತಾಂಪಿತರೌ ಕಾವ್ಯಾಸಕ್ತಿಃಪ್ರತಿಷ್ಠಿತಾ ।
ನದೀ ಪ್ರಾಯಾಚಕಾತ್ಯುಕ್ತಿಃ ಸುಖೀಸ್ಯಾತ್ಕೋವಿದೇಶಭಾಕ್ ॥

ಕೌ ಶಲ್ಯದೌ ಪಿತರೌ ಸ್ತಾಂ-ದುಃಖಪರಿಹಾರವನ್ನು ಮಾಡುವ ತಾಯಿತಂದೆಯರು ಯಾರು ? ಕೌಶಲ್ಯದೌ ಪಿತರೌ ಸ್ತಾಂ—ಮಕ್ಕಳಿಗೆ ವಿದ್ಯೆಯನ್ನು ದೊರಕಿಸಿ ಕೊಡುವ ತನ್ಮೂಲಕ ಬುದ್ಧಿವಂತರನ್ನಾಗಿ ಮಾಡುವ ತಾಯಿ ತಂದೆಯರು ದುಃಖ ಪರಿಹಾರ ಮಾಡಲು ಶಕ್ತರಾಗುತ್ತಾರೆ.

ಕಾ ವ್ಯಾಸಕ್ತಿಃ ಪ್ರತಿಷ್ಠಿತಾ—ಸ್ಥಿರವಾಗಿ ನಿಲ್ಲತಕ್ಕಂತಹ ಶ್ರೇಷ್ಠವಾದ (ವಿಶೇಷ) ಆಸಕ್ತಿಯು ಯಾವುದು (ಶ್ರೇಷ್ಠವಾದ ಅಭಿರುಚಿಯಾವುದು) ?
ಕಾವ್ಯಾಸಕ್ತಿಃ ಪ್ರತಿಷ್ಠಿತಾ—ಪ್ರಸಿದ್ಧ ಕವಿಗಳ ಕಾವ್ಯವನ್ನು ವ್ಯಾಸಂಗ ಮಾಡುವುದರಲ್ಲಿ ಇರತಕ್ಕ ಆಸಕ್ತಿಯು ಶ್ರೇಷ್ಠ ಹಾಗೂ ಸ್ಥಿರವಾಗಿರುತ್ತದೆ.

ನದೀಪ್ರಾಯಾ ಚ ಕಾ ಅತ್ಯುಕ್ತಿಃ-ಯಾರ ಅಥವಾ ಯಾವ ಅತ್ಯುಕ್ತಿಯು ನದಿಯ ಪ್ರವಾಹ ಸದೃಶವಾಗಿ ದೀರ್ಘವಾಗಿರುತ್ತದೆ ? ನದೀಪ್ರಾ ಯಾಚಕಸ್ಯ ಅತ್ಯುಕ್ತಿಃ— ತೇಜಸ್ವಿಯಲ್ಲದ ಎಂದರೆ ದೀನ ಭಾವದಿಂದ ಕೂಡಿದ ಯಾಚಕನು ಹೇಳುವ (ಬೇಡುವ) ಮಾತುಗಳು ನದೀಪ್ರವಾಹಸದೃಶವಾಗಿ ದೀರ್ಘವಾಗಿರುತ್ತವೆ. ವಿದೇಶಭಾಕ್ ಸುಖೀ ಕಃ ಸ್ಯಾತ್—ಅಪರಿಚಿತ ಪ್ರದೇಶಗಳಿಗೆ ಹೋಗಿ ನೆಲೆಸಿರುವ ಯಾರು ಸುಖ ವಾಗಿರುತ್ತಾರೆ ? ಕೋವಿದೇಶಭಾಕ್ ಸುಖೀಸ್ಯಾತ್-ವಿದ್ವಜ್ಜನರನ್ನು ಒಳಗೊಂಡಿರು ವವನು ವಿದೇಶದಲ್ಲಿದ್ದರೂ ಸುಖಿಯಾಗಿರುತ್ತಾನೆ.

೯. ಕಾಸಾರಭೂಮಿಃ ವೃಕ್ಷಾಣಾಂ ನೀರಸೇಕೋ ನ್ಯಸೇದ್ವನಮ್ ।
ಪಥಿಕೈಃ ಕಾಙ್ಕ್ಷ್ಯತೇ ಛಾಯಾ ಕಂದರಂ ನಾತಪೋ ದಹೇತ್ ॥

ಕಾ ಸಾರಭೂಮಿಃ ವೃಕ್ಷಾಣಾಂ—ಮರಗಳು ಚೆನ್ನಾಗಿ ಬೆಳೆಯಲು ಅನುಕೂಲಕರ ವಾದ ಭೂಪ್ರದೇಶ ಯಾವುದು ? (ಸಾರವತ್ತಾದ ಪ್ರದೇಶಯಾವುದು ?) ಕಾಸಾರ ಭೂಮಿಃ ಅಂದರೆ ಸರೋವರದ ಸಮೀಪದಲ್ಲಿರುವ ಭೂಮಿಯು. ಸರೋವರದ ನೀರು ಹತ್ತಿರದಲ್ಲಿರುವುದರಿಂದ ಆ ನೀರಿನ ಆಸರೆಯಿಂದ ವೃಕ್ಷಗಳು ಬೆಳೆಯಲು ಅನುಕೂಲಕರ ವಾಗಿರುತ್ತದೆ.

ನೀರಸೇ ಕಃ ನ್ಯಸೇತ್‌ವನಮ್-ನೀರಿನ ಆಶ್ರಯವಿಲ್ಲದ ಪ್ರದೇಶದಲ್ಲಿ ಕಾಡನ್ನು ಯಾರು ಬೆಳೆಸಬಹುದು ? ಅಂತಹ ಭೂ ಭಾಗದಲ್ಲಿ ಕಾಡು ಹೇಗೆ ಬೆಳೆಯಬಲ್ಲದು (ಉಪಾಯಾಂತರವಾದುದು) ನೀರಸೇಕೋ ನ್ಯಸೇದ್ವನಮ್-ಆಗಾಗ್ಗೆ ಬೇರೆ ಸ್ಥಳದಿಂದ-ಲಾದರೂ ತಂದು ನೀರನ್ನು ಗಿಡಗಳಿಗೆ ಹಾಕತಕ್ಕಂತಹವರು ಕಾಡನ್ನು ಬೆಳೆಸ ಬಹುದು.

CC-0. Oriental Reasearch Library, Mysore. Digitized by Sri Muthulakshmi Research Academy

ಪಥಿ ಕೈ : ಕಾಂಕ್ಷ್ಯತೇ ಛಾಯಾ–ಮಾರ್ಗ ಮಧ್ಯದಲ್ಲಿ ನೆರಳನ್ನು ಆಶ್ರಯಿಸಲು ಯಾರು ಇಚ್ಛಿಸುತ್ತಾರೆ ? ಪಥಿಕೈಃ ಕಾಂಕ್ಷ್ಯತೇ ಛಾಯಾ–ಪ್ರಯಾಣಮಾಡ ತಕ್ಕಂತಹವರು (ಮಾರ್ಗಾಯಾಸದಿಂದ ಬಳಲಿದವರು) ನೆರಳಿನ ಆಶ್ರಯವನ್ನು ಪಡೆಯಲಿಚ್ಛಿಸುತ್ತಾರೆ.

ಆತಪಃ ಕಂ ದರಂ ನ ದಹೇತ್—ಬಿಸಿಲು ಯಾರನ್ನು ಅತ್ಯಲ್ಪಮಟ್ಟದಲ್ಲಿಯೂ ಸುಡಲಾರದು ? ಕಂದರಂ ಆತಪಃ ನ ದಹೇತ್—ಗುಹೆಯನ್ನು ಬಿಸಿಲು ದಹಿಸಲಾರದು. ಗುಹೆಯ ಒಳಗೆ ಸೂರ್ಯನ ಕಿರಣದ ಪ್ರವೇಶವೇ ಇಲ್ಲದಿರುವುದರಿಂದ ದಹಿಸುವ ಪ್ರಶ್ನೆಯೇ ಉಂಟಾಗುವುದಿಲ್ಲ.

೧೦. ಅವನೌ ಕಸ್ಯ ದುರ್ಗೋऽಬ್ಧಿಃ ಕೋಟಿತಾಢ್ಯಃ ಸಮೃದ್ಧಿಮಾನ್ ।
ನಿರ್ಬಲಾಕಾ ಘನತತಿಃ ವರ್ಷೋತ್ಕರ್ಷೇ ಸ್ರವಂತಿಕಾಃ ॥

ಅವನೌ ಕಸ್ಯ ದುರ್ಗಃ ಅಬ್ಧಿಃ-ಈ ಭೂಮಿಯಲ್ಲಿ ಯಾರಿಗೆ ಸಮುದ್ರವನ್ನು ದಾಟಲಾಗುವುದಿಲ್ಲ ಎಂಬುದು ಪ್ರಶ್ನೆ (ದುರ್ಗಃ= ಹೋಗಲಾಗುವುದಿಲ್ಲ.) ಅವನೌಕಸ್ಯ ಅಬ್ಧಿಃ ದುರ್ಗಃ-ಹಡಗು ಇಲ್ಲದವನು ಸಮುದ್ರವನ್ನು ದಾಟಲಾರ ಎಂದು ಉತ್ತರ. ಸಮುದ್ರವು ತುಂಬಾ ವಿಶಾಲವಾಗಿರುವುದರಿಂದ ಕೇವಲ ಹಡಗಿನ ಮೂಲಕ ದಾಟಬಹುದು ಅವನೌಕಃ ಹಡಗು ನಷ್ಟವಾಗಿದ್ದಾಗ (ಇಲ್ಲದಿರುವಾಗ) ದಾಟಲು ಆಗುವುದಿಲ್ಲ. ಕಃ ಆಢ್ಯಃ ಸಮೃದ್ಧಿಮಾನ್ ಅಟಿತಾ-ಯಾವುದನ್ನು ಸಂಪಾದಿಸಿರುವವನು ವೃದ್ಧಿಹೊಂದಿ ಇಚ್ಛೆಯಿರುವ ಪ್ರದೇಶಗಳಲ್ಲಿ ಸಂಚರಿಸಬಹುದು ? (ಬೇರೆ ಬೇರೆ ದೇಶಗಳಿಗೆ ಹೋಗಬಹುದು ?) (ಅಟಿತಾ ಸಂಚರಿಸಬಹುದು) ಕೋಟಿತಾ ಆಢ್ಯಃ ಸಮೃದ್ಧಿಮಾನ್ (ಅಟಿತಾ)–ಕೋಟಿಗಟ್ಟಲೆ ಹಣವನ್ನು ಸಂಪಾದಿಸಿರುವವನು ವೃದ್ಧಿ ಹೊಂದಿದವನಾಗಿ ಸಂತೋಷದಿಂದ ಇಚ್ಛೆಬಂದಲ್ಲಿ ಸುಖವಾಗಿ ಹೋಗಬಹುದು.

ನಿರ್ಬಲಾ ಕಾ ಘನತತಿಃ-ಯಾವ ಮೇಘ ಪಂಕ್ತಿಯು ಅತ್ಯಂತ ಶಿಥಿಲವಾಗಿರುತ್ತದೆ ? ನಿರ್ಬಲಾಕಾ ಘನತತಿಃ ಅಂದರೆ ಪಕ್ಷಿಗಳಿಲ್ಲದಿರುವಾಗ (ಬೆಳ್ಳಕ್ಕಿಗಳಿಲ್ಲದಿರುವಾಗ) ಮೇಘ ಪಂಕ್ತಿಯು ಶಿಥಿಲವಾಗಿರುತ್ತದೆ. ಮಳೆಗಾಲದಲ್ಲಿ ಮಾತ್ರ ಬಲಾಕಾಪಕ್ಷಿಗಳು ಆಕಾಶದಲ್ಲಿ ಹಾರಾಡುತ್ತಿರುತ್ತವೆ. ಆವಾಗ ಮೇಘಸಮೂಹವು ದಟ್ಟವಾಗಿರುತ್ತದೆ. ಮಳೆಗಾಲವಿಲ್ಲದಿರುವಾಗ ಬಲಾಕಾಪಕ್ಷಿಗಳೂ ಇಲ್ಲದೇ ಮೇಘಸಮೂಹವು ದಟ್ಟವಾಗಿರುವುದಿಲ್ಲ.

ವರ್ಷೋತ್ಕರ್ಷೇ ಕಾಃ ಸ್ರವಂತಿ–ಅತಿಯಾದ ಮಳೆಗಾಲದಲ್ಲಿ ಯಾವುದು ತುಂಬಿ ಹರಿಯುತ್ತದೆ ? ವರ್ಷೋತ್ಕರ್ಷೇ ಸ್ರವಂತಿಕಾಃ (ಸ್ರವಂತಿ)–ಹೆಚ್ಚಾದ ಮಳೆಗಾಲದಲ್ಲಿ ನದಿಗಳು ಉಕ್ಕಿ ಪ್ರವಾಹರೂಪದಲ್ಲಿ ಹರಿಯಲಾರಂಭಿಸುತ್ತವೆ (ಸ್ರವಂತಿ ಎಂಬುದನ್ನು ಎರಡು ಬಾರಿಯೂ ತೆಗೆದುಕೊಳ್ಳಬೇಕು) (ಸ್ರವಂತಿಕಾ = ನದೀ)

CC-0. Oriental Reasearch Library, Mysore. Digitized by Sri Muthulakshmi Research Academy

೧೧. ಕಂದಳೌಘಂ ಲತ್ಯೈತಿ ಪ್ರಾಕ್ ಮೃದ್ವೀಕಾ ಶ್ಲಾಘ್ಯತೇ ಲತಾ ।
ಸಕಲಂ ಕಂ ವಿಧುಂ ಪ್ರಾಹುಃ ದಿಶೋ ವ್ಯಕ್ತಾಃ ಪ್ರಭಾಂತಿಕಾಃ ॥

ಲತಾ ಪ್ರಾಕ್ ದಳೌಘಂ ಕಂ ಏತಿ-ಲತಾವಸ್ಥೆಗೂ ಮೊದಲು ಪತ್ರಸಮೂಹವು ಯಾವ ಅವಸ್ಥೆಯನ್ನು ಹೊಂದುತ್ತದೆ. ಕಂದಲೌಘಂ ಏತಿ-ಲತಾವಸ್ಥೆಗೂ ಮೊದಲು ಕಿಸಲಯ ಸಮೂಹವನ್ನು ಹೊಂದುತ್ತದೆ.

ಕಾ ಲತಾ ಮೃದ್ವೀ ಶ್ಲಾಘ್ಯತೇ-ಯಾವ ಲತೆಯು ಮೃದ್ವೀ (ಮೃದುವಾದುದು) ಎಂಬ ಹೊಗಳಿಕೆಗೆ ಅರ್ಹವಾಗುತ್ತದೆ. ಮೃದ್ವೀಕಾ ಲತಾ ಶ್ಲಾಘ್ಯತೇ-ದ್ರಾಕ್ಷಿಯ ಬಳ್ಳಿಯು ಮೃದ್ವೀ ಎಂಬ ಶ್ಲಾಘನೆಗೆ ಅರ್ಹವಾಗುತ್ತದೆ. ಸಕಲಂ ಕಂ ವಿಧುಂ ಪ್ರಾಹುಃ-ಯಾವ ಚಂದ್ರನನ್ನು ಷೋಡಶಕಲೆಗಳಿಂದ ಕೂಡಿದವನೆಂದು (ಪೂರ್ಣಿಮಾಚಂದ್ರನೆಂದು) ಹೇಳುತ್ತಾರೆ. ಸಕಲಂಕಂ ವಿಧುಂ ಪ್ರಾಹುಃ-ಕಲಂಕದಿಂದ ಕೂಡಿದ ಚಂದ್ರನನ್ನು ಪೂರ್ಣಿಮಾಚಂದ್ರನೆಂದು ಹೇಳುತ್ತಾರೆ. ಪೂರ್ಣಿಮಾ ಚಂದ್ರಮನ ಮಧ್ಯದಲ್ಲಿ ಕಪ್ಪು ಕಲೆ ಕಾಣುತ್ತಿರುವುದರಿಂದ ಅದನ್ನೇ ಕಲಂಕ ಎಂದು ಹೇಳಿದೆ ಬೇರೆ ಕಾಲದಲ್ಲಿ ಆ ಕಪ್ಪು ಕಳಂಕವು ಕಾಣುವುದಿಲ್ಲ.

ದಿಶೋ ವ್ಯಕ್ತಾ ಪ್ರಭಾಂತಿ ಕಾಃ ವ್ಯಕ್ತವಾದ ಯಾವ ದಿಕ್ಕುಗಳನ್ನು 'ಪ್ರಭಾಂತಿ' ಎಂದು (ಪ್ರಕಾಶದ ಸಮೀಪದಲ್ಲಿ ಪ್ರಕಾಶಿಸುತ್ತವೆ ಎಂದು) ಕರೆಯುತ್ತಾರೆ.

ಪ್ರಭಾಂತಿಕಾ ದಿಶಃ ವ್ಯಕ್ತಾಃ ಪ್ರಭಾಂತಿಕಾಃ-ಸೂರ್ಯನ ಪ್ರಭೆಗೆ ಹತ್ತಿರವಿರುವ ದಿಕ್ಕುಗಳು ಸೂರ್ಯನ ಪ್ರಕಾಶದಿಂದ ಹೊಳೆಯುತ್ತವೆ, ವ್ಯಕ್ತವಾಗಿವೆ ಎಂದು ಕರೆಯುತ್ತಾರೆ.

೧೨. ಅಪಾಂಶ್ರೀಃ ಕೈರವಸ್ಥಾನ್ಯೈಃ ಸಾ ರಾಕಾರಾತ್ರಿರುಚ್ಯತೇ
ಸ್ಯಾಚ್ಚಕೋರಸದೃಗ್ಧೀಮಾನ್ ಕೇಕಾಲಾಭಗಳಾಃ ಖಗಾಃ ॥

ಅಪಾಂ ಶ್ರೀಃ ಕೈಃ ಅವಸ್ಥಾನ್ಯೈಃ ಯಾವುದಕ್ಕೆ-ಸ್ಥಾನವಾಗಿರುವುದರಿಂದ ( ಯಾವುದರ ಹತ್ತಿರವಿರುವುದರಿಂದ) ನೀರು ಕಾಂತಿಯುಳ್ಳದ್ದಾಗುತ್ತದೆ.

ಕೈರವಸ್ಥಾನ್ಯೈಃ ಅಪಾಂ ಶ್ರೀಃ-ಕನ್ನೈದಿಲೆಗೆ ಸ್ಥಾನವಾಗಿರುವುದರಿಂದ ಕಾಂತಿಯು ಅಧಿಕವಾಗಿರುತ್ತದೆ. ಸರೋವರದಲ್ಲಿನ ನೀರಿನೊಳಗೆ ಸುಂದರವಾದ ಕನ್ನೈದಿಲೆಗಳು ಇರುವಾಗ ಸರೋವರದ ನೀರು ತುಂಬಾ ಕಾಂತಿಯುಕ್ತವಾಗಿ ಆಕರ್ಷಣೀಯ ವಾಗಿರುತ್ತದೆ.

ಸಾರಾ ಕಾ ರಾತ್ರಿಃ ಉಚ್ಯತೇ-ಯಾವ ರಾತ್ರಿಯು ಮನೋಹರವಾದುದೆಂದು ಹೇಳಲ್ಪಡುತ್ತದೆ. (ಶ್ರೇಷ್ಠವಾದುದೆಂದು ಕರೆಯಲ್ಪಡುತ್ತದೆ.) ಸಾ ರಾಕಾ ರಾತ್ರಿಃ ಉಚ್ಯತೇ-ಅಂತಹ ಪ್ರಸಿದ್ಧವಾದ ಪೂರ್ಣಿಮಾರಾತ್ರಿಯು ಮನೋಹರವಾದುದೆಂದು



CC-0. Oriental Reasearch Library, Mysore. Digitized by Sri Muthulakshmi Research Academy

ಹೇಳಲ್ಪಡುತ್ತದೆ. ಪೌರ್ಣಮಿಯ ಚಂದ್ರನ ಕಾಂತಿಯಿಂದ ರಾತ್ರಿಯು ಶೋಭಿಸುವುದರಿಂದ ಆ ರಾತ್ರಿಯು ಮನೋಹ್ಲಾದಕರವಾಗಿರುತ್ತದೆ. (ರಾಕಾ = ಪೂರ್ಣಿಮಾ)

ಚಕೋರ ಸದೃಕ್ ಧೀಮಾನ್ ಕಃ ಸ್ಯಾತ್ = ರಸದೃಕ್ ಧೀಮಾನ್–ಮತ್ತೊಬ್ಬರ ಗುಣವನ್ನು ಗ್ರಹಿಸತಕ್ಕ ಬುದ್ಧಿವಂತನು ಯಾರು ? ಮತ್ತು ಚಕೋರ ಪಕ್ಷಿಗೆ ಸರಿಸಮನಾದ ಬುದ್ಧಿವಂತನು ಯಾರು ? ಹೀಗೆ ಇಲ್ಲಿ ಎರಡು ಪ್ರಶ್ನೆಗಳನ್ನು ಗಮನಿಸಬಹುದು ಇದಕ್ಕೆ ಉತ್ತರ ಒಂದೇ ಆಗಿರುತ್ತದೆ. ಚಕೋರ ಸದೃಕ್ ಧೀಮಾನ್–ಚಕೋರ ಪಕ್ಷಿಯು ಮಾತ್ರ ಚಂದ್ರನ ಕಿರಣಗಳಲ್ಲಿರುವ ಅಮೃತವನ್ನು ಕುಡಿಯಬಲ್ಲದು. ಇಂತಹ ಚತುರತೆಯು ಬೇರೆ ಪಕ್ಷಿಗಳಿಗೆ ಇರುವುದಿಲ್ಲ ಆದುದರಿಂದ ರಸೇದೃಕ್ = (ರಸಜ್ಞನಾದ) ಪರರ ಗುಣಗ್ರಾಹಿಯಾಗಿರುವವನು ಮಾತ್ರ ಬುದ್ಧಿವಂತನೆನಿಸುತ್ತಾನೆ ಮತ್ತು ಚಕೋರ ಪಕ್ಷಿಯು ಅಮೃತವನ್ನು ಗ್ರಹಿಸುವಂತೆ, ಇವನೂ ಗುಣವನ್ನು ಗ್ರಹಿಸಿ ಚಕೋರಪಕ್ಷಿ ಸದೃಶನೂ ಆಗಿರುತ್ತಾನೆ. ಇಂತಹವನೇ ಧೀಮಾನ್ ಎನಿಸಿಕೊಳ್ಳುತ್ತಾನೆ. ರಸಜ್ಞನೂ, ಗುಣಗ್ರಾಹಿಯೂ ಆದ ಬುದ್ಧಿವಂತನು ಚಕೋರ ಸದೃಶನೂ ಆಗಿರುತ್ತಾನೆ.

ಕೇ ಕಾಲಾಭಗಳಾಃ ಖಗಾಃ-ವರ್ಷಾ ಕಾಲದಲ್ಲಿರಂಜಿಸುವ (ಸಂತೋಷ ನೀಡುವ) ಕಂಠವುಳ್ಳ ಪಕ್ಷಿಗಳು ಯಾವುದು ? ಕೇಕಾಲಾಭಗಳಾಃ ಖಗಾಃ-ಕೇಕಾರವದ ಮಧುರ ಶಬ್ದವನ್ನು ಹೊಂದಿರುವ ಕಂಠವುಳ್ಳ ನವಿಲುಗಳು. ನವಿಲು ಮೇಘಾವೃತವಾದಾಗ ಮಧುರವಾದ ಕೇಕಾರವದಿಂದ ನೃತ್ಯವನ್ನು ಮಾಡುತ್ತದೆ.

೧೩. ಸೂಕ್ಷ್ಮಾ ಪಿಕೋಕ್ತಿಃ ಶ್ರಾವ್ಯಾ ಸ್ಯಾತ್ಕಿಂ ಶುಕಾದ್ಯೈರ್ವೃತಂ ವನಮ್ ।
ಕಾಮೋಹಿತಾ ಸ್ಯಾತ್ ಸುಲಭಾ ಕಂದರ್ಪಂ ಭಜತೇ ಯುವಾ ॥

ಸೂಕ್ಷ್ಮಾಪಿ ಕಾ ಉಕ್ತಿಃ ಶ್ರಾವ್ಯಾ—ಅಲ್ಪವಾದರೂ ಯಾವ ಮಾತು ಇಂಪಾಗಿರುತ್ತದೆ. ಸೂಕ್ಷ್ಮಾ ಪಿಕೋಕ್ತಿಃ ಶ್ರಾವ್ಯಾ—ಅಲ್ಪವಾದ ಕೋಗಿಲೆಯ ಕಲರವವು ತುಂಬಾ ಇಂಪಾಗಿರುತ್ತದೆ.

ಕಿಂ ಶುಕಾದ್ಯೈಃ ವೃತಂ ವನಂ — ಗಿಳಿಯೇ ಮೊದಲಾದ ಪಕ್ಷಿಗಳಿಂದ ಆವರಿಸಲ್ಪಟ್ಟ ಕಾಡು ಯಾವುದು ? ಕಿಂಶುಕಾದ್ಯೈಃವೃತಂ ವನಂ—ಮುತ್ತುಗದ ವೃಕ್ಷವೇ ಮೊದಲಾದವುಗಳಿಂದ ಕೂಡಿದ ಕಾಡು.

ಕಾ ಮೋಹಿತಾ ಸ್ಯಾತ್ ಸುಲಭಾ—ಸುಲಭವಾಗಿ (ಪ್ರಯತ್ನವಿಲ್ಲದೆ) ಮೋಹಕ್ಕೆ ಒಳಗಾಗುವವರು ಯಾರು ? ಕಾಮೋಹಿತಾ ಸುಲಭಾ—ಮನ್ಮಥ ಬಾಧೆಯಿಂದ ಕೂಡಿದವರು ಸುಲಭವಾಗಿ ಮೋಹಕ್ಕೆ ಒಳಗಾಗುತ್ತಾರೆ.

ಕಂ ದರ್ಪಂ ಭಜತೇ ಯುವಾ—ಯೌವನಶಾಲಿಯಾದ ಯಾರು ಮನ್ಮಥನಂತೆ ಗರ್ವಿತನಾಗುತ್ತಾನೆ. ಕಂದರ್ಪಂ ಭಜತೇ ಯುವಾ ಮನ್ಮಥವಿಕಾರವುಳ್ಳ ಯುವಕನು ಮನ್ಮಥನಂತೆ ಗರ್ವಿತನಾಗುತ್ತಾನೆ.

CC-0. Oriental Reasearch Library, Mysore. Digitized by Sri Muthulakshmi Research Academy

೧೪. ಕನ್ಯಾಯಮಿಚ್ಛೇತ್ಕಾಂತೇಪ್ಸುಃ ಸ್ವಪ್ತುಮರ್ಹಾ ಸಮಂಚಕಾ ।
ಕಾಂತಾಂ ಕೋ ರಕ್ಷಿತುಂ ಶಕ್ತಃ ಕೋಮಲಾಂಗೋಜ್ವಲಶ್ಶಿಶುಃ ॥

ಕಾಂತೇಪ್ಸುಃ ಕಂ ನ್ಯಾಯಮ್ ಇಚ್ಛೇತ್—ಪತ್ನಿಯನ್ನು ಹೊಂದಲು ಇಚ್ಛಿಸುವವನು (ವಿವಾಹವಾಗಲು ಬಯಸುವವನು) ಯಾವ (ನ್ಯಾಯಂ) ಮಾರ್ಗ ವನ್ನು (ವಿಧಿಯನ್ನು) ಅನುಸರಿಸುತ್ತಾನೆ? ಕಾಂತೇಪ್ಸುಃ ಅಯಂ ಇಚ್ಛೇತ್-ಕನ್ಯೆಯನ್ನು ಬಯಸುವವನು ಅಯಂ ಎಂದರೆ ಶುಭಾವಹವಿಧಿಂ-ಶುಭವಿಧಿ ಪೂರ್ವಕವಾದ ವಿವಾಹವನ್ನು ಬಯಸುತ್ತಾನೆ.

ಸಮಂ ಸ್ವಪ್ತುಂ ಅರ್ಹಾಃ ಕೇ—(ವಧುವಿನ) ಜೊತೆಯಲ್ಲಿ ಶಯನಕ್ಕೆ ಯಾರು ಅರ್ಹರಾಗುತ್ತಾರೆ? ಸಮಂಚಕಾಃ ಸ್ವಪ್ತುಮ್ ಅರ್ಹಾಃ—ಹಾಸಿಗೆಯುಳ್ಳವರು (ಮಂಚವುಳ್ಳವರು) ಅರ್ಹರಾಗುತ್ತಾರೆ.

ಕಃ ಕಾಂತಾಂ ರಕ್ಷಿತುಂ ಶಕ್ತಃ—ಪತ್ನಿಯನ್ನು ರಕ್ಷಿಸಲು ಯಾವುದು ಅಥವಾ ಯಾರು ಶಕ್ತರು? ಕಾಂತಾಂಕಃ ಪತಿಯ ಅಂಕವೇ (ಉತ್ಸಂಗವೇ ಅಥವ ಆಶ್ರಯ) ಕಾಂತೆಯನ್ನು ರಕ್ಷಿಸಲು ಶಕ್ತವಾಗುತ್ತದೆ.

ಕೋ ಮಲಾಂಗೋಜ್ವಲಃ ಶಿಶುಃ—ಮಲಿನವಾಗಿದ್ದರೂ ಕಾಂತಿಯಿಂದ ಕೂಡಿರುವ ಶಿಶುವು ಯಾವುದು? ಕೋಮಲಾಂಗಃ ಉಜ್ವಲಃ ಶಿಶುಃ-ಮೃದುವಾದ ಅಂಗವುಳ್ಳ ಮಗುವು (ಶಿಶುವು) ಮಲಿನಯುಕ್ತವಾಗಿದ್ದರೂ ಕಾಂತಿಯಿಂದ ಕೂಡಿ ಸರ್ವರಿಗೂ ಆಪ್ಯಾಯಮಾನವೆನಿಸುತ್ತದೆ. ಸಾಧಾರಣವಾಗಿ ಮಕ್ಕಳು ಎಳೆಯ ವಯಸ್ಸಿನಲ್ಲಿ ಮುದ್ದಾಗಿದ್ದು ಮಲಿನವಾಗಿದ್ದರೂ ಜನರ ಪ್ರೀತಿಗೆ ಪಾತ್ರವಾಗುತ್ತವೆ.

೧೫. ವೇಶ್ಯಾಬುದ್ಧಿಃ ಕಾಕುಲೀನಾ ಕಾಂಚನಾಶೋದ್ಯತಾಂ ತ್ಯಜೇತ್ ।
ದಂಪತೀ ಕೌತುಕೋಪಾತ್ತೌ ಕೌಮಾರಾಹೌ ವಧೂವರೌ ॥

ವೇಶ್ಯಾಬುದ್ಧಿಃ ಕಾ ಕುಲೀನಾ — ರಸಿಕರನ್ನು ವಶೀಕರಣ ಮಾಡಿಕೊಳ್ಳುವ ಬುದ್ಧಿಯು ಯಾವ ವೇಶ್ಯೆಗೆ ಇರುತ್ತದೆ ವೇಶ್ಯಾ ಬುದ್ಧಿಃ ಕಾಕುಲೀನಾ ಕಾಕೋಕ್ತಿ ಎಂದರೆ ಅರ್ಥಾಂತರಗಳನ್ನು ಕೊಡುವ ಶಬ್ದಪ್ರಯೋಗದಲ್ಲಿ ನಿಪುಣಳಾಗಿ ತತ್ಪರತೆ ಯನ್ನುಂಟುಮಾಡುವ ಬುದ್ಧಿಯು ಬುದ್ಧಿಯುಳ್ಳ ವೇಶ್ಯೆಗೆ ಇರುತ್ತದೆ. ನಾಶೋದ್ಯತಾಂ ಕಾಂ ತ್ಯಜೇತ್-ನಷ್ಟವನ್ನುಂಟುಮಾಡತಕ್ಕ ಯಾವ ಕಾರ್ಯವನ್ನು ತ್ಯಜಿಸಬೇಕು? ಕಾಂಚನಾಶೋದ್ಯತಾಂ ತ್ಯಜೇತ್—ಚಿನ್ನವನ್ನು ಶೋಧಿಸುವ ಉದ್ಯಮವನ್ನು ಬಿಡಬೇಕು.

ಕೋಪಾತ್ತೌ ದಂಪತೀ ಕೌ—ಸದಾ ಕೋಪದಿಂದ ಕೂಡಿದ ದಂಪತಿಗಳಾರು? ಕೌತುಕೋಪಾತ್ತೌ ದಂಪತೀ—ಅತಿಯಾದ ಕುತೂಹಲದಿಂದ ಕೂಡಿ, ತಮಗೆ ಸಂಬಂಧಪಡದೇ ಇರುವ ವಿಷಯಗಳನ್ನು ತಿಳಿದುಕೊಳ್ಳಬೇಕೆಂಬ ಇಚ್ಛೆಯುಳ್ಳ ಪತಿ ಪತ್ನಿಯರು ಆ ಇಚ್ಛೆಯು ಕೈಗೂಡದೇ ಇದ್ದಾಗ ಕೋಪಗೊಳ್ಳುತ್ತಾರೆ.

CC-0. Oriental Reasearch Library, Mysore. Digitized by Sri Muthulakshmi Research Academy

ಕೌ ಮಾರಾರ್ಹೌ ವಧೂವರೌ—ಮನ್ಮಥಾವೇಶಕ್ಕೆ ಒಳಪಡುವ ವಧೂವರರು ಯಾರು ? ಕೌಮಾರಾರ್ಹೌ ವಧೂವರೌ— ತುಂಬುಯೌವನವುಳ್ಳ ವಧೂವರರು ಮನ್ಮಥನ ಬಾಧೆಗೆ ಒಳಗಾಗುತ್ತಾರೆ.

೧೭. ಲಿಪಿಶ್ಚಕಾಸ್ತಿ ವೈಧಾತ್ರೀ ನಿರ್ವಿಚಾರಸ್ಸದೈವ ಕಃ
ಗೀತಿಃ ಕಾ ರಾಗತಾನಾರ್ಹಾ ವಾರ್ಯಾಕಾ ಪುರುಷಸ್ಥಿತಿಃ ||

ಲಿಪಿಶ್ಚ ಕಾ ಅಸ್ತಿ ವೈಧಾತ್ರೀ—ಪೋಷಣೆಯನ್ನು ಅಥವಾ ಉದ್ಧಾರವನ್ನು ಮಾಡುವ ಲಿಪಿಯು (ಹಣೆಬರಹವು) ಯಾವುದು ?
ಲಿಪಿ : ಚಕಾಸ್ತಿ ವೈಧಾತ್ರೀ-ವಿಧಿಯ (ದೈವ) ಸಂಬಂಧವಾದ ಲಿಪಿಯು (ಹಣೆಬರಹವು) ವಿರಾಜಿಸುತ್ತದೆ. ಭಾರತದೇಶದ ತತ್ತ್ವಶಾಸ್ತ್ರದ ಪ್ರಕಾರ ಮನುಷ್ಯನ ಏಳಿಗೆಯು ಹಣೆಯಬರಹವನ್ನೇ ಅನುಸರಿಸುತ್ತದೆ. ಮನುಷ್ಯನ ರಕ್ಷಣಾ ಕಾರ್ಯವು ಕೇವಲ ವಿಧಿಲಿಪಿಯನ್ನು ಅನುಸರಿಸುತ್ತದೆ ಎಂಬುದೇ ಆಶಯ.

ನಿರ್ವಿಚಾರಃ ಸದೈವ ಕಃ-ಯಾವಾಗಲೂ ಯಾವುದೇ ವಿಧವಾದ ವ್ಯಸನಗಳಿಲ್ಲದೇ ಇರುವವನು ಯಾರು ?

ನಿರ್ವಿಚಾರಃ ಸದೈವಕ :—ದೇವತಾನುಗ್ರಹವುಳ್ಳವನು. ಅಥವಾ ಅದೃಷ್ಟ ಫಲಗಳನ್ನು ಬಯಸದವನು.

ಗೀತಿ : ಕಾ ರಾಗತಾನಾರ್ಹಾ—ರಾಗ ತಾನಗಳಿಗೆ ಅರ್ಹವಾದ ಗೀತೆಯು ಯಾವುದು ? ಕಾರಾಗತಾ ಗೀತಿ : ನಾರ್ಹಾ—ನಿರ್ಬಂಧಸ್ಥಳ ಅಂದರೆ ಅಡೆತಡೆ ಇರುವ ಗೀತೆಯು ನಿಜವಾದ ಸಂಗೀತವಲ್ಲ, ಅಂದರೆ ಅಬಾಧಿತವಾದ ಗೀತೆಯು ನಿಜವಾದ ಗೀತೆ.

ವಾರ್ಯಾ ಕಾ ಪುರುಷಸ್ಥಿತಿ : ನಿವಾರಿಸಲು ಯೋಗ್ಯವಾದ ಪುರುಷನ ನಡೆವಳಿಕೆಯ ರೀತಿ ಯಾವುದು ? ಕಾಪುರುಷಸ್ಥಿತಿ : ವಾರ್ಯಾ—ನೀಚಮನುಷ್ಯನ ನಡೆವಳಿಕೆಯು ನಿವಾರಿಸಲ್ಪಡತಕ್ಕದ್ದು ಹೋಗಲಾಡಿಸತಕ್ಕದ್ದು.

೧೭. ಕಾಲಸತ್ತಾಫಲವತೀ ಸಮುತ್ಕಾಪ್ರೀಯತೇ ಸಭಾ ।
ಸಮಾನಕಸ್ಯ ನಿತ್ಯಂ ಶ್ರೀ : ಜನುರ್ಲಬ್ಧ್ವಾಶುಕೋತ್ತರತ್ ||

ಲಸತ್ತಾ ಫಲವತೀ ಕಾ—ಇಷ್ಟಾರ್ಥ ಸಾಧನೆಯಲ್ಲಿ ಸ್ಫೂರ್ತಿಯನ್ನು ಉಂಟು ಮಾಡುವುದು ಯಾವುದು ? ಕಾಲಸತ್ತಾ ಫಲವತೀ—ಅನುಕೂಲವಾದ ಕಾಲ ಪ್ರಾಪ್ತಿಯು ಫಲವನ್ನು ಕೊಡುವಂತಹುದು. ಕಾ ಸಭಾ ಸಮುತ್ ಪ್ರೀಯತೇ-ಯಾವ ಸಭೆಯು ಸಂತೋಷದಿಂದ ಕೂಡಿ ಪ್ರೀತಿಯುಕ್ತವಾಗಿರುತ್ತದೆ ? ಸಮುತ್ಕಾ ಪ್ರೀಯತೇ ಸಭಾ—ಅಧಿಕ ಪ್ರೀತಿ ಹಾಗೂ ಆಸಕ್ತಿಗಳಿಂದ ಕೂಡಿದ ಸಭೆಯು ಸಂತೋಷಯುಕ್ತವಾಗಿರುತ್ತದೆ.

CC-0. Oriental Reasearch Library, Mysore. Digitized by Sri Muthulakshmi Research Academy

ಕಸ್ಯ ಶ್ರೀ: ನಿತ್ಯಂ ಸಮಾನಾ-ಯಾವ ಸಂಪತ್ತು ಸದಾಕಾಲದಲ್ಲಿಯೂ ಏಕರೂಪವಾಗಿರುತ್ತದೆ? ನಾಕಸ್ಯ ಶ್ರೀ: ನಿತ್ಯಂ—ಸ್ವರ್ಗದ ಸಂಪತ್ತು ಯಾವಾಗಲೂ ನಶಿಸದೆ ಏಕರೂಪವಾಗಿರುತ್ತದೆ.

ಜನು: ಲಬ್ಧ್ವಾ ಆಶು ಅತರತ್ ಕ:—ಹುಟ್ಟಿದ ತಕ್ಷಣವೇ ಆ ಜನ್ಮದಿಂದ ಮುಕ್ತರಾದವರು ಯಾರು? ಶುಕಃ ಜನುರ್ಲಬ್ಧ್ವಾ ಅತರತ್—ಶುಕಮುನಿಯು ಹುಟ್ಟಿದ ತಕ್ಷಣವೇ ತಪೋನಿಷ್ಠನಾಗಿ ಆತ್ಮ ಸಾಕ್ಷಾತ್ಕಾರವನ್ನು ಹೊಂದಿದನು ಎಂದರೆ ಜನ್ಮದಿಂದ ಶೀಘ್ರವಾಗಿ ಬಿಡುಗಡೆ ಹೊಂದಿದನು.

೧೮. ಪುನರಾವೃತ್ತಿ ವಿರಹಿತಂ ಪದಮುಕ್ಷರ ಲಕ್ಷದೈರ್ನೃಪೈರ್ಭೋಜೇ ।
ಅಥ ಚ ಕವಿಹೃದಯಕುಶಲಸ್ತ್ರಾವಾನ್ ಪುರುಷೋತ್ತಮೋಽಸ್ತಿ ಕೀರ್ತ್ಯೈ ॥

ಕವಿಯ ಮನಸ್ಸಿನ ಅಭಿಪ್ರಾಯಗಳನ್ನು ತಿಳಿದು ಪ್ರತಿ ಅಕ್ಷರಗಳಿಗೂ ಲಕ್ಷಪರಿಮಿತಿಯ ಧನವನ್ನು ಕೊಡುವುದರ ಮೂಲಕ ಹೊಗಳಿಕೆಗೆ ಪಾತ್ರನಾದ ಪುರುಷ ಶ್ರೇಷ್ಠನು ಯಾರು? ಕವಿಯ ಹೃದಯವನ್ನು ತಿಳಿದು ಪ್ರತಿ ಅಕ್ಷರಕ್ಕೂ ಲಕ್ಷ ಸಂಖೆಯ ಧನವನ್ನು ಕೊಟ್ಟು (ಕವಿಗಳಿಗೆ ಪುರಸ್ಕಾರವನ್ನೀಯುತ್ತಾ) ಪುನರಾವೃತ್ತಿ ವಿರಹಿತಂ ಪದಂ ಎಂದರೆ ಕೈವಲ್ಯ ಪದವಿಯನ್ನು ಹೊಂದಿರುವ ಪುರುಷಶ್ರೇಷ್ಠನೆಂದರೆ ಭೋಜ ಮಹಾರಾಜ.

ಕವಿ ಹೃದಯದಲ್ಲಿ ನೆಲೆಸಿ ಅವರಿಗೆ ಅಸಾಧಾರಣ ಪ್ರತಿಭೆಯನ್ನು ಕರುಣಿಸಿ, ಅಕ್ಷರಲಕ್ಷಂ ಎಂದರೆ ಶಾಶ್ವತ ಪದವಿಯನ್ನು ಕರುಣಿಸಿದ (ಮಹಾವಿಷ್ಣುವೇ) ಪುರುಷೋತ್ತಮನೇ ಹೊಗಳಿಕೆಗೆ ಅರ್ಹನು ಕವಿಗಳು ತನ್ನ ಜ್ಞಾನ ಚಕ್ಷುಸ್‌ನಿಂದ ಪರಮಾತ್ಮನನ್ನು ತಿಳಿದು ಅವನ ಕರುಣೆಯಿಂದ ಕಾವ್ಯವನ್ನು ರಚಿಸುತ್ತಾರೆ. ಎಂಬುದೇ ಕವಿಯ ಆಶಯ.

೧೯. ಸ್ವಯಮ್ ಈಶ್ವರೋಽಸ್ತಿ ನಾಮ್ನಾ ಸುತಃ ಕುಮಾರಃ ಕುಟುಂಬಿನೀ ತ್ವಾರ್ಯಾ ।
ಧಾಮ ತು ಧಾಮ್ನೈವ ಪರಂ ಸ ಪುಮಾನ್ ಜ್ಞೇಯಃ ಕಥಂ ವಿನಾನುಭವಮ್ ॥

ಯಾರು ಸ್ವಯಂ ಪ್ರಭು (ಸ್ವಾಮಿ) ಎಂಬ ಸಂಜ್ಞೆಯುಳ್ಳವರು? ಯಾರ ಪುತ್ರನು ಕುಮಾರ ಎಂದು ಕರೆಯಿಸಿಕೊಳ್ಳುವವನು? ಯಾರ ಕುಟುಂಬವು (ಪತ್ನಿ) ಆರ್ಯಾ (ಶ್ರೇಷ್ಠ) ಎಂಬ ಸಂಜ್ಞೆಯುಳ್ಳವಳು. ಯಾರ ವಾಸಸ್ಥಾನವು 'ಪರಂಧಾಮ' ಎಂಬ ಸಂಜ್ಞೆಯನ್ನು ಹೊಂದಿರುವುದು. ಅಂತಹವನ ವಿಷಯವನ್ನು ಅನುಭವವಿಲ್ಲದೆ (ಪುರಾಣ ಪ್ರಸಿದ್ಧ ವಿಷಯಗಳನ್ನು ತಿಳಿಯದೆ) ಯಾರು ತಾನೆ ತಿಳಿಯಬಲ್ಲರು?

ಈಶ್ವರಃ ಶರ್ವ ಈಶಾನಃ—ಎಂಬುದರಿಂದ ಅಂತಹವನು ಈಶ್ವರನೆಂದೂ, ಆರ್ಯಾ ದಾಕ್ಷಾಯಣೀ ಚೈವ–ಎಂಬುದರಿಂದ ಆರ್ಯಾ ಎಂದರೆ ಪತ್ನಿ ಪಾರ್ವತಿಯೆಂದೂ,

CC-0. Oriental Reasearch Library, Mysore. Digitized by Sri Muthulakshmi Research Academy

ಪುತ್ರನು ಕುಮಾರ ಎಂದರೆ ಕುಮಾರಃ ಕ್ರೌಂಚದಾರಣಃ ಎಂಬುವುದರಿಂದ ಕ್ರೌಂಚ ಪರ್ವತವನ್ನು ಭೇದಿಸಿದ ಪ್ರಸಿದ್ಧನಾದ ಷಣ್ಮುಖಸ್ವಾಮಿಯೆಂದು, ಅಂತಹ ಶಿವನ ವಾಸಸ್ಥಾನ ಕೈಲಾಸನೆಂದು ತಿಳಿಯಬಹುದಾಗಿದೆ.

೨೦. ಶ್ರೀನಿವಾಸ ಕವಿಸಾರ್ವಭೌಮವಾಕ್ಸರ್ವಭೂಮಿವಿದಿತಾ ಜಯತ್ಯಸೌ ।
ಯತ್ಸಮಂ ಫಣಿತುಮುತ್ತರಾವಳಿಂ ನಾಮರಾಶ್ಚಪಟವಃ ಕ್ವ ಪಾಮರಾಃ ॥

ಸಮಸ್ತದೇಶಗಳಲ್ಲಿಯೂ ಪ್ರಸಿದ್ಧನಾಗಿರುವ ಕವಿಸಾರ್ವಭೌಮ ಶ್ರೀನಿವಾಸಕವಿ-ಯಿಂದ ಉತ್ತರಾವಳಿಯು ರಚಿಸಲ್ಪಟ್ಟು ಜಯಶಾಲಿಯಾಗಿದೆ. (ಎಲ್ಲರ ಹೊಗಳಿಕೆಗೂ ಪಾತ್ರವಾಗಿದೆ) ಈ ಉತ್ತರಾವಳಿಗೆ ಸಮನಾಗಿರತಕ್ಕಂತಹ ಮತ್ತೊಂದನ್ನು ರಚಿಸಲು ದೇವತೆಗಳೂ ಸಮರ್ಥರಾಗುವುದಿಲ್ಲ ಎಂದ ಮೇಲೆ ಸಾಧಾರಣ ಜನರ (ಪಾಮರರ) ಬಗ್ಗೆ ಹೇಳುವುದೇನಿದೆ.

## ಮೂರನೆಯ ಕ್ರಮ

ಈ ಕ್ರಮದಲ್ಲಿ ಒಂದು ವಿಷಯವನ್ನು ನಿರೂಪಿಸಿ ಆ ವಿಷಯದ ಬಗೆಗೆ ಪ್ರಶ್ನೆಯನ್ನು ಕೇಳಿ ಉತ್ತರವನ್ನು ಕೊಡಲಾಗಿದೆ. ಶ್ಲೋಕದ ಎರಡನೆಯ ಸಾಲಿನಲ್ಲಿ ಉತ್ತರವನ್ನು ಕೊಟ್ಟು ಅದಕ್ಕೆ ಯೋಗ್ಯವಾದ ಪ್ರಶ್ನೆ ಯಾವುದೆಂದು ಕೇಳಲಾಗಿದೆ. ಮೊದಲನೆಯ ಪ್ರಶ್ನೆಗೆ ಯಾವುದು ಉತ್ತರವಾಗಿದೆಯೋ, ಅದೇ ಪದದ ಪದಚ್ಛೇದ-ವನ್ನು ಯೋಗ್ಯ ರೀತಿಯಲ್ಲಿ ಮಾಡಿಕೊಂಡಾಗ ಎರಡನೆಯ ಸಾಲಿನ ಉತ್ತರಕ್ಕೆ ಪ್ರಶ್ನೆಯಾಗುತ್ತದೆ. ಹೀಗೆ ಒಂದೇ ಪದವು ಉತ್ತರವೂ ಪ್ರಶ್ನೆಯೂ ಆಗುವಂತೆ ಕವಿ ಚಾತುರ್ಯದಿಂದ ಮೂರನೆಯ ಕ್ರಮವನ್ನು ನಿರೂಪಿಸಿದ್ದಾನೆ.

೧. ವೇಂಕಟವಿಭುಂ ಭಜೇಽಹಂ ಸತತಂ ಮಾಂ ತ್ರಾಯತಾ ಸಾಂ ಕೀದೃಶಶ್ಚೇತ್ ।
ತದ್ವಿಬುಧೈರವಧಾರ್ಯಂ ಸರಸ್ವತೀತ್ಯುತ್ತರಸ್ಯ ಯಃ ಪ್ರಶ್ನಃ ॥
ಕಾರುಣ್ಯಭೃತ್ ।

ಯಾವಾಗಲೂ ನನ್ನನ್ನು ರಕ್ಷಿಸತಕ್ಕಂತಹ ವೆಂಕಟೇಶ್ವರನನ್ನು ಪ್ರಾರ್ಥಿಸುತ್ತೇನೆ. ಅವನು ಎಂತಹವನು ? ಅಂತೆಯೇ ಎರಡನೆಯ ಸಾಲಿನಲ್ಲಿರುವ "ಸರಸ್ವತೀ" ಎಂಬ ಉತ್ತರಕ್ಕೆ ಯಾವುದು ಪ್ರಶ್ನೆಯಾಗಬಹುದು ? ಈ ಎರಡಕ್ಕೂ ಒಂದೇ ಉತ್ತರ ಎಂದರೆ "ಕಾರುಣ್ಯಭೃತ್" ವೆಂಕಟೇಶ್ವರನು ಕರುಣೆಯುಳ್ಳವನು ಎಂಬುವೇ ಉತ್ತರ. "ಸರಸ್ವತೀ" ಎಂಬ ಉತ್ತರಕ್ಕೆ ಕಾ ಆರುಣ್ಯಭೃತ್ ಅನುರಾಗ ವಿಶಿಷ್ಟಳು ಅನುಗ್ರಹವಿಶಿಷ್ಟಳಾದವಳು ಯಾರು ಎಂಬುದೇ ಪ್ರಶ್ನೆ. ಹೀಗೆ ಉತ್ತರ ಹಾಗೂ ಪ್ರಶ್ನೆಗಳಿಗೆ 'ಕಾರುಣ್ಯಭೃತ್' ಎಂಬುದೊಂದೇ ಆಗುತ್ತದೆ. ಈ ಶ್ಲೋಕವು ಮಂಗಳರೂಪವೂ ಆಗಿರುವುದನ್ನು ಗಮನಿಸಬಹುದು.

CC-0. Oriental Reasearch Library, Mysore. Digitized by Sri Muthulakshmi Research Academy

೨. ತನಯೌ ಗಿರಿತನಯಾಯಾಃ ಕಟಿಸೂತ್ರಮುಪೇತ್ಯ ಕೀದೃಶೌ ಸ್ಫುರತಃ ।
ತದ್ವಿಬುಧೈರವಧಾರ್ಯಂ ಸ್ತನಾವಿತಿ ಹ್ಯುತ್ತರಸ್ಯ ಯಃ ಪ್ರಶ್ನಃ ॥
' ಕೌಪೀನಸುಂದರೌ '

ಪಾರ್ವತಿಯ ಮಕ್ಕಳಾದ ವಿಘ್ನೇಶ್ವರ ಹಾಗೂ ಷಣ್ಮುಖಸ್ವಾಮಿಯು ಕಟಿಸೂತ್ರವನ್ನು ಧರಿಸಿ ಹೇಗೆ ಕಾಂತಿಯುಕ್ತರಾಗಿದ್ದಾರೆ. ' ಕೌಪೀನಸುಂದರೌ ' ಈ ಮುದ್ದು ಮಕ್ಕಳು ಕೇವಲ ಕೌಪೀನಧಾರಿಗಳಾಗಿದ್ದರೂ ಅತ್ಯಂತ ಸುಂದರರಾಗಿ ವಿರಾಜಿಸುತ್ತಿದ್ದಾರೆ. (ಮುದ್ದಾದ ಮಕ್ಕಳು ಸಾಕಷ್ಟು ಬಟ್ಟೆಯಿಲ್ಲದಿದ್ದರೂ ಚೆನ್ನಾಗಿ ಕಾಣುತ್ತಾರೆ.) ಇಲ್ಲಿ ಕೌಪೀನಸುಂದರೌ ಎಂಬ ಉತ್ತರವೇ ಕೌ ಪೀನ ಸುಂದರೌ ಎಂದು ಬದಲಿಸಿದಾಗ [ಯಾವುವು ಪೀನ (ದಪ್ಪ)ವಾಗಿ ಸುಂದರವಾಗಿವೆ] ಸ್ತನೌ ಎಂಬ ಉತ್ತರಕ್ಕೆ ಪ್ರಶ್ನೆಯಾಗುತ್ತದೆ. ಹೀಗೆ 'ಕೌಪೀನ ಸುಂದರೌ' ಎಂಬ ಒಂದೇ ಪದವು ಉತ್ತರ ಹಾಗೂ ಪ್ರಶ್ನೆಯೂ ಆಗಿದೆ.

೩. ರಣರಂಗವ್ಯಾಸಂಗಶೂರೇಭ್ಯೋ ಮನಸಿ ರೋಚತೇ ಕೀದೃಕ್ ।
ತದ್ವಿಬುಧೈರವಧಾರ್ಯಂ ಚಿಕುರಾ ಇತ್ಯುತ್ತರಸ್ಯ ಯಃ ಪ್ರಶ್ನಃ ॥
॥ ಕೇಲಿಸದೃಶಃ ॥

ವೀರಾವೇಶದಿಂದ ಯುದ್ಧ ಮಾಡುತ್ತಿರುವ ಶೂರರಿಗೆ ಮನಸ್ಸಿನಲ್ಲಿ ಯುದ್ಧವು ಹೇಗೆ ರುಚಿಸುತ್ತದೆ? ಇದಕ್ಕೆ ಉತ್ತರ ಕೇಲಿಸದೃಶಃ "[ಆಟದಂತಹ ವಿಷಯಗಳು.] ಯುದ್ಧವು ಭಯಾನಕವಾಗಿದ್ದರೂ ಮನರಂಜನೆಯ ಆಟದಂತೆ ಭಯರಹಿತರಾಗಿ ನಿರಾಯಸದಿಂದ ಯುದ್ಧಮಾಡುತ್ತಾರೆ. ಚಿಕುರಾ" (ಕೇಶವು) ಎಂಬ ಉತ್ತರಕ್ಕೆ ಕೇಲಿಸದೃಶಾಃ ಎಂಬುದನ್ನು ಕೇ ಅಲಿ ಸದೃಶಃ ಯಾವುವು ದುಂಬಿಯಂತೆ ಕಪ್ಪಾಗಿವೆ ಎಂಬುದೇ ಪ್ರಶ್ನೆಯಾಗುತ್ತದೆ.

೪. ಕಾಮಿನ್ಯಾಃ ಕುಚಕುಂಭಃ ಭಾಮಿನ್ಯಾಃ ಕೀದೃಶಶ್ಚ ನಿಟಿಲೇಂದುಃ ।
ತದ್ವಿಬುಧೈರವಧಾರ್ಯಂ ಶುಭವಿಧಿರಿತ್ಯುತ್ತರಸ್ಯ ಯಃ ಪ್ರಶ್ನಃ ॥
॥ ಕಸ್ತೂರ್ಯಾಢ್ಯಃ ॥

ಮೊದಲನೆಯ ಸಾಲಿನಲ್ಲಿ ಎರಡು ಪ್ರಶ್ನೆಗಳಿವೆ.

ಕಾಮಿನಿಯರ ಕುಂಭಸದೃಶ ಕುಚಗಳು, ಹಾಗೂ ವಿಲಾಸವತಿಯರ ಮುಖೇಂದುವು ಹೇಗಿವೆ ? ಇದಕ್ಕೆ ಉತ್ತರ. ॥ ಕಸ್ತೂರ್ಯಾಢ್ಯಃ ॥

ಎಂದರೆ ಸ್ತನವು ಕಸ್ತೂರಿಯ ಸೌಗಂಧ್ಯದಿಂದ ಶೋಭಿಸುತ್ತದೆ, ವಿಲಾಸವತಿಯರ ಮುಖವು ಕಸ್ತೂರೀತಿಲಕದಿಂದ ಕಾಂತಿಯುಕ್ತವಾಗಿವೆ. "ಶುಭವಿಧಿ" ಎಂಬ ಉತ್ತರಕ್ಕೆ " ಕಸ್ತೂರ್ಯಾಢ್ಯಃ " ಕಃ ತೂರ್ಯಾಢ್ಯಃ ಯಾವುದು ಮಂಗಳ

CC-0. Oriental Reasearch Library, Mysore. Digitized by Sri Muthulakshmi Research Academy

ವಾದ್ಯದಿಂದ ಶುಭಯುಕ್ತವಾಗಿದೆ? ಎಂಬುದೇ ಪ್ರಶ್ನೆಯಾಗುತ್ತದೆ. ಶುಭವಿಧಿಃ ವಿಧಿ ಪೂರ್ವಕ ನಡೆಯುವ ಮಂಗಳ ಕಾರ್ಯ, ಇದರಲ್ಲಿ ಮಂಗಳವಾದ್ಯವು "ತೂರ್ಯಾಢ್ಯಃ". ಶುಭಕರವಾಗಿರುತ್ತವೆ ಹೀಗೆ ಕಸ್ತೂರ್ಯಾಢ್ಯಃ ಎಂಬುದು ಉತ್ತರ ಹಾಗು ಪ್ರಶ್ನೆ ರೂಪವಾಗಿದೆ.

೫. ಕೃಪಣಮತಿಃ ಕೃಷಿಕಧೃತಿಃ ಕೃಪಾಣಲತಿಕಾ ಕೀರ್ತ್ಯತೇ ಕೀದೃಕ್
ತದ್ವಿಬುಧೈರವಧಾರ್ಯಂ ಪೂರ್ವದಿಗಿತ್ಯುತ್ತರಸ್ಯ ಯಃ ಪ್ರಶ್ನಃ ॥
"ಕೋಶಸ್ಫೂರ್ತಿಃ"

ಜಿಪುಣನ ಬುದ್ಧಿ, ರೈತನಧೈರ್ಯ, ಲತೆಯಂತೆ ಬಳುಕುತ್ತಿರುವ ಖಡ್ಗ, ಇವುಗಳು ಹೇಗೆ ಹೊಗಳಲ್ಪಡುತ್ತವೆ ಎಂಬ ಈ ಮೂರು ಪ್ರಶ್ನೆಗಳಿಗೆ ವಿವಿಧ ರೀತಿಯಲ್ಲಿ ಅರ್ಥೈಸಿಕೊಂಡಾಗ ಕೋಶಸ್ಫೂರ್ತಿಃ ಎಂಬುವುದೊಂದೇ ಉತ್ತರವಾಗುತ್ತದೆ. ಜಿಪುಣನಾದ ಮನುಷ್ಯನು ಸದಾ ಹಣವನ್ನು ಗಳಿಸುತ್ತಾ (ಕೋಶ) ತನ್ನ ಖಜಾನೆ ಯನ್ನು ತುಂಬುವುದರಲ್ಲಿ ನಿರತನಾಗಿರುತ್ತಾನೆಂದು ಹೊಗಳಲ್ಪಡುತ್ತಾನೆ, ರೈತನೂ ಧಾನ್ಯದಿಂದ ತನ್ನ ಕೋಶವನ್ನು ತುಂಬಿಕೊಳ್ಳುತ್ತಾನೆ. ಖಡ್ಗವೂ ಯುದ್ಧಕಾಲದಲ್ಲಿ ಉಪಯೋಗಿಸಬಹುದೆಂಬ ಕಾರಣದಿಂದ ಕೋಶದಲ್ಲಿ (ಒರೆಯಲ್ಲಿ) ರಕ್ಷಿಸಲ್ಪಡುತ್ತದೆ.

ಇದೇ "ಕೋಶಸ್ಫೂರ್ತಿಃ" ಎಂಬ ಉತ್ತರವು ಕಾ, ಉಷಃಸ್ಫೂರ್ತಿಃ (ಯಾವುದು ಉಷಸ್‌ನಿಂದ ಕಾಂತಿಯುಕ್ತವಾಗಿರುತ್ತದೆ?) ಎಂದು ಮಾಡಿದಾಗ "ಪೂರ್ವದಿಕ್" ಎಂಬುದೇ ಉತ್ತರ. ಉಷಸ್‌ನಿಂದ ಕಾಂತಿಯುಕ್ತವಾದುದು ಪೂರ್ವದಿಕ್ ಹೀಗೆ ಮೊದಲಿನ ಉತ್ತರವಾದ "ಕೋಶಸ್ಫೂರ್ತಿ" ಎಂಬುದೇ ಪ್ರಶ್ನೆಯೂ ಆಗಿದೆ.

೬. ಅನತಿಚಿರಮನತಿ ಕೃಚ್ಛ್ರಾತ್ಫಲಪ್ರದಾ ಭವತಿ ಕೀದೃಶೀ ಭೂಮಿಃ।
ತದ್ವಿಬುಧೈರವಧಾರ್ಯಂ ಯಃ ಪ್ರಶ್ನೋಽರ್ಹತಿ ಮರುತ್ಪ್ರವರ—
ಸುಹೃದಾಮ್ ॥ "ಕೋದ್ರವಭಾಕ್"

ಅತ್ಯಲ್ಪಕಾಲದಲ್ಲಿ ಆಯಾಸವಿಲ್ಲದೆ ಫಲವನ್ನು ಕೊಡುವ ಭೂಮಿಯು ಹೇಗಿರುತ್ತದೆ (ಯಾವುದು)? ಇದು ಪ್ರಶ್ನೆ, ಇದಕ್ಕೆ ಉತ್ತರ "ಕೋದ್ರವಭಾಕ್" ಕೋದ್ರವ (ಹಾರಕ) ಎಂಬುದು ಒಂದು ಧಾನ್ಯ ವಿಶೇಷ, ಅದು ಅತ್ಯಲ್ಪಕಾಲದಲ್ಲಿ ಫಲಿಸುತ್ತದೆ-ಯಲ್ಲದೆ ಅದನ್ನು ಬೆಳೆಯಲು ಅತಿಪ್ರಯತ್ನವನ್ನು ಮಾಡಬೇಕಾಗಿಲ್ಲ. ಅಂತಹ ಕೋದ್ರವಕ್ಕೆ ಯಾವ ಭೂಮಿಯು ಆಧಾರವಾಗಿರುತ್ತದೊ (ಯಾವ ಭೂಮಿಯಲ್ಲಿ ಅದನ್ನು ಬೆಳೆಯುತ್ತೇವೆಯೋ) ಆ ಭೂಮಿಯು "ಕೋದ್ರವಭಾಕ್" ಆಗಿರುತ್ತದೆ. "ಕೋದ್ರವಭಾಕ್" ಎಂಬ ಉತ್ತರವು ಮರುತ್ಪ್ರವರಃ (ಶ್ರೇಷ್ಠವಾಯು) ಎಂಬುವುದಕ್ಕೆ ಪ್ರಶ್ನೆಯಾಗಿದೆ. ಹೇಗೆಂದರೆ ದ್ರುಕ್‌ಗತೌ, ದ್ರವಂ, ಭಜತಿ – ಇತಿ ದ್ರವಭಾಕ್ (ಗಮನ) ಕಃ ದ್ರವಭಾಕ್-ಗಮನಶೀಲವುಳ್ಳದ್ದು ಯಾವುದು ಈ

CC-0. Oriental Reasearch Library, Mysore. Digitized by Sri Muthulakshmi Research Academy

ಪ್ರಶ್ನೆಗೆ ಉತ್ತರ '' ಮರುತ್ಪ್ರವರಃ '' ಶ್ರೇಷ್ಠವಾದ ವಾಯು ಎಂದಾಗುತ್ತದೆ ಹೀಗೆ ಕೋದ್ರವಭಾಕ್ ಎಂಬುದು ಸಭಂಗಶ್ಲೇಷದಿಂದ ಪ್ರಶ್ನೆಯೂ ಆಗುತ್ತದೆ ಭೂಮಿಯೆಂಬ ಉತ್ತರವು ಅಭಂಗಶ್ಲೇಷ ಮಾಡುವುದರಿಂದ ಬರುತ್ತದೆ.

೭. ಪೃಷ್ಠಂ ಕಯಾ ಧರಣ್ಯಾಃ ನಿತಂಬೋ ವಿಭಾತಿ ಚ ರಮಣ್ಯಾಃ ।
ತದ್ವಿಬುಧೈರವಧಾರ್ಯಂ ಯಃ ಪ್ರಶ್ನಃ ಸುರತೇಶ್ಚ ಸುಗತೇಸ್ಸ್ಯಾತ್ ॥
'' ಕಾಂಚ್ಯಾ ''

ಭೂಮಿಯ ಮಧ್ಯಭಾಗವು ಹಾಗೂ ರಮಣಿಯರ ನಿತಂಬಪ್ರದೇಶವು ಯಾವುದರಿಂದ ಶೋಭಿಸುತ್ತದೆ? ಈ ಪ್ರಶ್ನೆಗೆ ಉತ್ತರ "ಕಾಂಚ್ಯಾ '' ಎಂದರೆ ಭೂಮಿಯ ಮಧ್ಯ ಭಾಗವು ಕಾಂಚೀಪಟ್ಟಣದಿಂದಲೂ (ಭೂಮಧ್ಯಭಾಗದಲ್ಲಿ ಸಂಪದ್ಯುಕ್ತವಾದ ಕಾಂಚೀ ಪಟ್ಟಣವಿದೆ) ರಮಣಿಯರ ನಿತಂಬಭಾಗವು ಡಾಬನ್ನು (ವಡ್ಯಾಣ) ಧರಿಸಿರುವುದ ರಿಂದಲೂ ಶೋಭಿಸುತ್ತದೆ ಎಂಬುದೇ ಉತ್ತರ.

ಈ ಉತ್ತರವು (ಕಾಂಚ್ಯಾ) ಸುಗತಿ, ಸುರತಿ ಎಂದರೆ ಒಳ್ಳೆಯ ಗಮನ, ಮನೋಹ್ಲಾದಕತೆ ಇವುಗಳಿಗೆ ಮತ್ತೆ ಪ್ರಶ್ನೆಯಾಗಿದೆ.

ಹೇಗೆಂದರೆ-ಕಾ ಅಂಚೀ-ಯಾವುದು ಒಳ್ಳೆಯ ಗಮನ ಎಂಬ ಪ್ರಶ್ನೆಗೆ ಸುಗತಿ:

ಕಾ ಅಂಚೀ ಯಾವುದು ಸಂತೋಷಕರವಾಗಿ ಪರಿಣಮಿಸುತ್ತದೆ? ಎಂಬ ಪ್ರಶ್ನೆಗೆ 'ಸುರತಿ' (ಅಂಚ್ ಧಾತುವಿಗೆ ಗಮನ ಹಾಗೂ ಆಹ್ಲಾದಕತೆ ಎಂಬ ಎರಡು ಅರ್ಥಗಳಿವೆ) ಹೀಗೆ ಅಭಂಗಶ್ಲೇಷದಿಂದ ಉತ್ತರವಾದ ಕಾಂಚೀ ಎಂಬುದು ಸಭಂಗಶ್ಲೇಷ ಮಾಡಿದಾಗ ಪ್ರಶ್ನೆಯಾಗಿದೆ.

೮. ಅಭಿಲಷತೇ ಮೂಢಜನ: ಕಯಾಪರಧನಂ ಕಯಾಪರವಧೂಂ ಚ ।
ತದ್ವಿಬುಧೈರವಧಾರ್ಯಂ ಕವಿವಾಣೀತ್ಯುತ್ತರಸ್ಯ ಯಃ ಪ್ರಶ್ನಃ
" ಕಾಮಧುರಾ ''

ಮತ್ತೊಬ್ಬರ ಹಣ ಹಾಗೂ ಬೇರೆಯವರ ವಧುವನ್ನು ಯಾವ ಮೂರ್ಖರು ಅಪೇಕ್ಷಿಸು ತ್ತಾರೆ? ಹೀಗೆ ಇಲ್ಲಿ ಎರಡು ಪ್ರಶ್ನೆಗಳಿವೆ. ಇದಕ್ಕೆ ಶ್ಲೋಕದಲ್ಲಿ ಕೊಟ್ಟಿರುವಂತೆ 'ಕಾಮಧುರಾ' ಎಂಬುದೇ ಉತ್ತರ. ಎಂದರೆ ಕಾಮಾಭಿಲಾಷೆಯುಳ್ಳ ದುರ್ಜನರು ವಿವೇಚನಾರಹಿತರಾಗಿ ಕೇವಲ ಕಾಮತೃಪ್ತಿಯೇ ಸರ್ವಸ್ವವೆಂದು ತಿಳಿದು ಪರಧನ, ಪರಸತಿಯರನ್ನು ಇಚ್ಛಿಸುತ್ತಾರೆ. '' ಕಾಮಧುರಾ ಎಂಬ ಉತ್ತರವು ಕಾ, ಮಧುರಾ, (ಯಾವುದು ಮಧುರವಾಗಿರುವುದು ?) ಎಂಬುದು ಕವಿವಾಣೀ ಎಂಬುದಕ್ಕೆ ಪ್ರಶ್ನೆ ಯಾಗುತ್ತದೆ. ಹೀಗೆ 'ಕಾಮಧುರಾ' ಎಂದಾಗ ಉತ್ತರವಾದುದೇ ಕಾ, ಮಧುರಾ ಎಂದು ಪ್ರಶ್ನೆಯೂ ಆಗುತ್ತದೆ.

CC-0. Oriental Reasearch Library, Mysore. Digitized by Sri Muthulakshmi Research Academy

೯. ಗೋವರ್ಧನಗಿರೇಶ್ಛತ್ರದಂಡತಾಮುಪಯಾತಿ ಕಃ ।
ಗೃಧ್ರಾ ಇತ್ಯುತ್ತರಂ ಯಸ್ಯ ಪ್ರಶ್ನಸ್ಯ ಸಚಿವೋತ್ತರಮ್ ॥
ಕೇಶವಭುಜಃ ।

ಬೃಹತ್ತಾದ ಗೋವರ್ಧನ ಗಿರಿಯನ್ನು ಲೀಲಾಪೂರ್ವಕವಾಗಿ ಅನಾಯಾಸದಿಂದ ಚಕ್ರದಂಡದಂತೆ (ಛತ್ರಿಯಂತೆ) ಎತ್ತಿದವರು ಯಾರು ? ಎಂಬ ಪ್ರಶ್ನೆಗೆ "ಕೇಶವಭುಜಃ". (ಕೃಷ್ಣನಭುಜ) ಎಂಬುದೇ ಉತ್ತರ. ಇದೇ ಉತ್ತರವು ಗೃಧ್ರ (ಹದ್ದು) ಎಂಬ ಉತ್ತರಕ್ಕೆ ಕೇ ಶವಭುಜಃ- ಯಾವುವು ಶವವನ್ನು ಭಕ್ಷಿಸುತ್ತವೆ ? ಎಂಬುದು ಪ್ರಶ್ನೆಯಾಗುತ್ತದೆ. ಹೀಗೆ ಒಂದೇ ಪದವು ಉತ್ತರ ಹಾಗೂ ಪ್ರಶ್ನೆಯಾಗಿದೆ.

೧೦. ಆದೌ ಕಾರುಣ್ಯಭೃದ್ವಾಚ್ಯಂ ತತಃ ಕೌಪೀನಸುಂದರೌ ।
ತತಸ್ತು ಕೇಲಿಸದೃಶಃ ಕಸ್ತೂರ್ಯರ್ಘ್ಯಃ ತತಃ ಪರಮ್ ।

೧೧. ಕೋಷಸ್ಫೂರ್ತಿಃ ಕೋದ್ರವಭಾಕ್ ಕಾಂಚ್ಯಾ ಕಾಮಧುರಾ ತತಃ ।
ಯನ್ಮೃಗ್ಯಂ ತನ್ನಿಗದಿತಂ ಶೇಷಂ ವ್ಯಕ್ತಂ ಹಿ ಧೀಮತಾಮ್ ॥

೧೨. ಕುಶಲಧಿಯಾಂ ಕುತುಕಾರ್ಥಂ ಸಂಕ್ಷಿಪ್ತಂ ಯಾ ಶ್ರೀನಿವಾಸಸಂಗ್ರಥಿತಾ ।
ಚಿರಮುತ್ತರಾವಲಿರಿಯಂ ಜಯತು ಪ್ರಶ್ನಾಂತರಾಭಿನ್ನಾ ॥

ಮೂರನೇ ಕ್ರಮವನ್ನು ಸಮಾಪ್ತಿಗೊಳಿಸಿ ಕವಿಯು ಹತ್ತು ಹನ್ನೊಂದನೆಯ ಶ್ಲೋಕದಲ್ಲಿ ಮೂರನೆಯ ಕ್ರಮದಲ್ಲಿ ಕೊಟ್ಟಿರುವ ಎಲ್ಲ ಉತ್ತರಗಳನ್ನು ಸಂಕ್ಷಿಪ್ತವಾಗಿ ತಿಳಿಸಿರುತ್ತಾನೆ. ಮತ್ತು ಪ್ರಶ್ನಾಂತರಾಭಿನ್ನವಾದ ಈ ಉತ್ತರಾವಲಿಯು ಬುದ್ಧಿ-ವಂತರಿಗೆ ಆಶ್ಚರ್ಯಜನಕವಾಗಲೆಂದು ರಚಿಸಲ್ಪಟ್ಟಿದೆ. ಈ ಉತ್ತರಾವಲಿಯು ಯಶಸ್ಸನ್ನುಗಳಿಸಿ ಜಯುವಾಗಲಿ ಎಂದು ಕೊನೆಯಲ್ಲಿ ಶುಭವನ್ನು ಕೋರಿದ್ದಾನೆ.

## ನಾಲ್ಕನೆಯ ಕ್ರಮ

ಭಾವಿಕಹಿತಾಕ್ಷಮಾಕಾನುತಾ ಮಣಿವಾಸ್ತಿ ಕಾ ಧಿಯಾ ಸೇವ್ಯಾ ।
ಕಾ ವೈಶಿಷ್ಟ್ಯಾ ದೇವೇ ಮಾರನುತಾಖ್ಯಾಸ್ತಿ ಕಾ ಚ ಸ್ತ್ರೀ ॥ ೧ ॥

ಕಾ ದೇವತಾಸ್ತಿ ಗೇಯಾ ಭಾತಿ ಪ್ರತಿಭಾ ಹಿ ಕಾಶಿವೇ ನಿರತಾ ।
ಕಾ ನೇಯಾ ಭಾತಿ ನುರಿಪ ಭಾವ್ಯಾ ಕಾ ಸಾಹಿತೀ ಸ್ವಭಾವನಯಾ ॥ ೨ ॥

ಭಾತಿ ನನು ಕಾ ವಿಭಾಸ್ವಾ ಕಾಲಿನಾಯಾ ಪ್ರಿಯಾ ಹಿ ತಿಷ್ಠತಿ ಸಃ ।
ಛಾಯಾ ಹಿತಾಶ್ರಿಯಾ ಕಾ ಸಾಧ್ಯಾದಿಷ್ಟ್ಯಸ್ತು ನೈಜ ಭೂಮ್ಯಾ ಕಾ ॥ ೩ ॥

CC-0. Oriental Reasearch Library, Mysore. Digitized by Sri Muthulakshmi Research Academy

ಭಾರ್ಯಾ ಕಾತಿಮತವಿಭಾತಿರಸ್ಫುರತಿ ಕಾತು ಕುಸುಮಾಭಾ ।
ಸಾಹಸರಸತ್ತಮಾ ಕಾ ನಾಧೀನಾ ಕಾತಿ ದೂರಾಗ ಚಾರಾ ॥ ೪ ॥

ಕಾಲಂ ರಾವಣರಚನಾ ಜ್ಞಾತಾ ಭುವಿ ಸರಸತಾಹಿ ವರ್ಯಾ ಕಾ ।
ಸ್ತ್ರೀ ಕಾಲೋಽಭ್ಯಾ ಸಾ ಜನಿಕಾ ಶ್ರೀರ್ವನಸಸ್ತು ಜಾತಿಸೀತಿಜ್ಞಾ ॥ ೫ ॥

ರಾಕಾಸಾರರಸಾಕಾ ವಿದಿತಾ ದಿವಿ ಚಾರು ಕಾ ರತಾ ನಾನಾ ।
ಕಾ ಹಿ ಮಿತಾದ್ರಿಮುಖ ಚಯಾಸ್ತುತ್ಯಾ ಕಾಂತ್ಯಾಸ್ತು ಕಾಪಿವಾಸರಸಾ ॥ ೬ ॥

ಕಾ ನಿವಸತಿ ಭಾವ್ಯಾಕ್ಷಾಮಾರಾರ್ಹಾ ಕಾಳಿಪಾನಸೂಯ್ಯಾ ವಾ ।
ಸೇವಾಸುರಾನುಧೇಯಾ ಪಿಕಾತಿಭಾ ಕಾ ಚ ಮೇಯಾ ದ್ಯೌಃ ॥ ೭ ॥

ಕಾ ನಾಮ ಸಭಾಸಜಯಾ ಸಾರರಸಾ ಕಾ ವಿಭೇದನಂ ಗಾತುಮ್ ।
ಕಾ ತಾಪ ವಿದಿತಭಾವ್ಯಾ ಕಾಲಂ ಕವಿತಾನು ಭಾಸ ತಾಂ ಸ ವಿಭುಃ ॥ ೮ ॥

ದ್ವಾತ್ರಿಂಶದ್ವಾಕ್ಯಮಿತಾ ಗ್ರಂಥೋಽಯಂ ಶ್ರೀನಿವಾಸಸತ್ಕವಿನಾ ।
ಪ್ರೀತ್ಯೈ ಹರೇರ್ವಿಜಯತಾಂ ಪ್ರಶ್ನವಿಲೋಮೋತ್ತರಾವಳಿರಪೂರ್ವಾ ॥ ೯ ॥

ಶ್ರೀನಿವಾಸಕವಿಸಾರ್ವಭೌಮವಾನ್ ಸರ್ವಭೂಮಿವಿದಿತಾ ಜಯತ್ಯಸೌ ।
ಯತ್ಸಮಂ ಫಣಿತುಮುತ್ತರಾವಳಿಂ ನಾಮರಾಷ್ಟಪಟವಃ ಕ್ವ ಪಾಮರಾಃ ॥ ೧೦ ॥

ಇತಿ ಶ್ರೀನಿವಾಸವಿರಚಿತೇ ಪ್ರಶ್ನೋತ್ತರಸುಭಾಷಿತೇ
ಪ್ರಶ್ನವಿಲೋಮೋತ್ತರಾವಳಿಃ ಚತುರ್ಥಃ ಕ್ರಮಃ ।

wo 5398—MUPM—1000 copies—17-9-99

CC-0. Oriental Reasearch Library, Mysore. Digitized by Sri Muthulakshmi Research Academy

